# ಶ್ರೀ ತಿರುಪತಿ ವೆಂಕಟೇಶ ದೇವರು



॥ ಶ್ರೀ ॥

ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ,

ಉಡುಪಿ.

# ವೆಂಕಟೇಶಪಾರಿಜಾತ

ಚತುರ್ಥಮುದ್ರಣ ೧೫೦೦

ಶ್ರೀಕೃಷ್ಣಮುದ್ರಣಾಯ, ಉಡುಪಿ.

1932.

ಬೆಲೆ: 0—8—0.



ಜ್ಞಾನಾನಂದಮಯಂ ದೇವಂ ನಿರ್ಮಲಸ್ಫಟಿಕಾಕೃತಿಂ
ಆಧಾರಂ ಸರ್ವವಿದ್ಯಾನಾಂ ಹಯಗ್ರೀವ ಮುಪಾಸ್ಮಹೇ

RI VENKATESWARA

|| ಶ್ರೀಃ ||

ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ,

ಉಡುಪಿ.

# ವೆಂಕಟೇಶಪಾರಿಜಾತ

ಚತುರ್ಥಮುದ್ರಣ ೧೫೦೦

ಶ್ರೀಕೃಷ್ಣಮುದ್ರಣಾಲಯ, ಉಡುಪಿ.

1932.

ಬೆಲೆ: 0—8—0.

PRINTED & PUBLISHED BY
P. GURU RAO,
AT THE
SRI KRISHNA PRESS, UDUPI.



# ಪ್ರಸ್ತಾವನೆ.

ಶ್ರೀಪರಮಾತ್ಮನು ಕಲಿಕಾಲದಲ್ಲಿ ದುಃಖಿಸುವ ಜನರ ಸರ್ವಾಭೀಷ್ಟದಾನಕ್ಕಾಗಿಯೇ ತಿರುಪತಿಯಲ್ಲಿ ಶ್ರೀಶ್ರೀನಿವಾಸರೂಪದಿಂದ ವಾಸಮಾಡುತ್ತಿದ್ದಾನೆಂಬುದು ಆಸೇತುಹಿಮಾಚಲದ ಮಧ್ಯವರ್ತಿಗಳಿಗೆ ತಿಳಿಯದ ವಿಷಯವಲ್ಲ. "ಕಲೌ ಸಂಕೀರ್ತ್ಯ ಕೇಶವಮ್" ಎಂಬಂತೆ ಆ ಶ್ರೀನಿವಾಸನು ಭಕ್ತಿಪುರಸ್ಸರವಾದ ಸಂಕೀರ್ತನಸೇವೆಯಿಂದಲೇ ಸಂತುಷ್ಟನಾಗುವನೆಂಬುದಕ್ಕೆ ಅವನ ದಾಸರಾಚರಿಸುವ ಕೀರ್ತನಸಂಪ್ರದಾಯವೇ ಸಾಕ್ಷಿ. ಅಂತಹ ಸಂಕೀರ್ತನೋಪಯುಕ್ತವಾಗುವಂತೆ ಶ್ರೀನಿವಾಸದೇವರ ಅತ್ಯಂತ ಭಕ್ತರಾದ **ಗೋಕಾವಿ ಅನಂತಾರ್ಯರು** ಈ ವೆಂಕಟೇಶಪಾರಿಜಾತವೆಂಬ ಶ್ರೀನಿವಾಸಕಲ್ಯಾಣೋತ್ಸವ ಕಥೆಯನ್ನು ಭವಿಷ್ಯೋತ್ತರಪುರಾಣಾಧಾರದಿಂದ ರಚಿಸಿರುತ್ತಾರೆ. ಅವರು ಈ ಗ್ರಂಥ ಮಾಡಲು ಕಾರಣವನ್ನು ಕೇಳಿದೊಡನೆ ಸರ್ವರಿಗೂ ಈ ಗ್ರಂಥದ ಮಹತ್ವವೆಂತಹುದೆಂದು ತಿಳಿಯದಿರಲಾರದಾದುದರಿಂದ ಆ ಚರಿತ್ರೆಯನ್ನು ವೃದ್ಧರ ಉಪದೇಶಾನುಸಾರ ಸಂಕ್ಷೇಪದಿಂದ ವಾಚಕರಿಗೆ ಅರ್ಪಿಸುವೆವು.

ಮುರುಗಾಂಜಿಲ್ಲೆಯಲ್ಲಿ ಈ ಗೋಕಾವಿ ಅನಂತಾರ್ಯರು ಸರ್ವದಾ ಶ್ರೀನಿವಾಸಸೇವಾತತ್ಪರರಾಗಿದ್ದರು. ಒಂದುದಿನ ಸ್ವಪ್ನದಲ್ಲಿ ದೇವರು "ನನಗೆ ಕಲ್ಯಾಣಮಾಡು" ಎಂದು ಪ್ರೇರಿಸಿದರು. ಅದರರ್ಥ ತಿಳಿಯದೆ ಅವರು ಸುಮ್ಮಗಿದ್ದರು. ಆ ಮೇಲೊಂದುದಿನ ಅಲ್ಲಿಯ ರಾಜಸ್ಥಾನಕ್ಕೆ ಹೋದವರು ಗೋಡೆಯಲ್ಲಿ ಬರೆದಿರುವ ರಾಜನ ಪಟ್ಟದರಾಣಿಯ ಚಿತ್ರವನ್ನು ನೋಡಿ ಮೃತಳಾಗಿದ್ದ ತನ್ನ ಹೆಂಡತಿಯ ರೂಪಸಾದೃಶ್ಯವು ಅದರಲ್ಲಿದ್ದುದರಿಂದ ಚನ್ನಾಗಿ ದೃಷ್ಟಿಸಿ ನೋಡಿದರು. ಅರಸನು ಅದನ್ನೆಲ್ಲ ನೋಡಿ ಇವರು ತನ್ನ ಹೆಂಡತಿಯಲ್ಲಿ ಗೋಪ್ಯವಾಗಿ ಬೆರತಿರಬಹುದೆಂದು ಭ್ರಮಿಸಿ ಕ್ರೋಧದಿಂದ ಭಟರಿಗೆ ಬಂದಿಖಾನೆಯಲ್ಲಿಡುವಂತೆ ಅಪ್ಪಣೆ ಕೊಟ್ಟನು. ರಾಜಸೇವಕರು ನಿರಪರಾಧಿಯಾದಿವರ ಕೈಗೆ ಬೇಡಿ ತೊಡಿಸಿ

ಬಂಧನದಲ್ಲಿಟ್ಟರು. ಅನಂತಾರ್ಯರು "ಶ್ರೀನಿವಾಸನೆ! ನಿನ್ನ ಭಕ್ತನಿಗೆ ಈ ಕಷ್ಟ ದೊರಕಬಹುದೇ" ಎಂದು ಮೊರೆಯಿಟ್ಟರು. ಆ ರಾತ್ರಿಯಲ್ಲಿ ದೇವರು ಸ್ವಪ್ನದಲ್ಲಿ "ನನ್ನ ಕಲ್ಯಾಣಚರಿತ್ರೆ ಮಾಡಲು ಯೋಗ್ಯನಾಗಿದ್ದು ನಾನು ಪ್ರೇರಿಸಿದರೂ ಏಕೆ ಮಾಡಲಿಲ್ಲ? ಇನ್ನಾದರೂ ಮಾಡು, ದುಃಖ ಹೋಗುವುದು" ಎಂದು ಬೋಧಿಸಿದನು. ಆ ಮೇಲೆ ಬೆಳಿಗ್ಯೆ ಅದನ್ನು ತೊಡಗಿದರು. ಆರು ಅಧ್ಯಾಯವಾದೊಡನೆ ಬೇಡಿ ಕಳಚಿಹೋಯಿತು. ಇದನ್ನು ನೋಡಿ ರಕ್ಷಕರು ಅರಸನಿಗೆ ತಿಳಿಸಿದರು. ರಾಜನು ತಾನೇ ಬಂದು ಅದನ್ನು ತೊಡಿಸಿದನು. ಅವನೆದುರೇ ತುಂಡಾಗಿ ಬಿದ್ದಿತು. ಆಗ ಅರಸನು ವಂದಿಸಿ ಅದರ ಕಾರಣ ಕೇಳಿದನು. ಅನಂತಾರ್ಯರು ಎಲ್ಲ ವಿಷಯವನ್ನು ಹೇಳಿದರು. ಕೂಡಲೇ ಅವರ ಬಂಧನ ಬಿಡಿಸಿ, ರಾಜ್ಯವನ್ನು ಮಗನಿಗೆ ಕೊಟ್ಟು, ಅವರ ಪಾದಕ್ಕೆ ವಂದಿಸಿ, ತನ್ನನ್ನು ಶಿಷ್ಯನಾಗಿ ಮಾಡಿಕೊಳ್ಳಬೇಕೆಂದು ಬೇಡಿ ಅವರಿಂದ ಜ್ಞಾನೋಪದೇಶವನ್ನು ಪಡೆದನು. ಈ ಕಥೆಯಿಂದ ಶ್ರೀನಿವಾಸಪ್ರೇರಣಾನುಸಾರವಾಗಿ ಗ್ರಂಥವು ರಚಿತವಾದುದರಿಂದ ಮೂಲಪುರಾಣದಂತೆ ಪಾರಾಯಣಾದಿಗಳಿಂದ ಭಜಕರ ಸರ್ವಾಭೀಷ್ಟವನ್ನು ಸಂಪಾದಿಸಿಕೊಡುವುದೆಂಬುದಕ್ಕೆ ಸಂದೇಹವಿಲ್ಲ. ಇಂತಹ ಗ್ರಂಥವನ್ನು ಶೋಧಿಸಿ ಕನ್ನಡಾಕ್ಷರದಿಂದ ಈಗಲನೇ ಸಲವೂ ಮುದ್ರಿಸಿರುತ್ತೇವೆ. ಶೋಧನದೋಷಗಳಿದ್ದರೆ ನಮಗೆ ತಿಳಿಸಿದಲ್ಲಿ ಪುನರ್ಮುದ್ರಣದಲ್ಲಿ ಸರಿಪಡಿಸುವೆವು. ಹೀಗೆಯೇ ಶ್ರೀನಿವಾಸ ಕಲ್ಯಾಣವೆಂಬ ಅಪೂರ್ವಗ್ರಂಥವನ್ನು ಮುದ್ರಿಸಿರುವೆವು. ಇಂತಹ ಅಪೂರ್ವಗ್ರಂಥಗಳನ್ನು ಸಂಗ್ರಹವಿದ್ದವರು ಕಳುಹಿಸಿಕೊಟ್ಟರೆ ಛಾಪಿಸಿ ಪ್ರಕಟಿಸಬಹುದು.

ಇತಿ ಸುಜನವಿಧೇಯ,

ಉಡುಪಿ,
ತಾ. 20—12—1932.

ಪಾವಂಜೆ ಗುರುರಾವ್,
ಪ್ರಕಾಶಕ.



॥ ಶ್ರೀಃ ॥



॥ ಶ್ರೀಮದ್ವೇಂಕಟೇಶಾಯ ನಮಃ ॥

# ವೆಂಕಟೇಶಪಾರಿಜಾತ.

(ಕನ್ನಡ ವೆಂಕಟೇಶಮಾಹಾತ್ಮ್ಯ.)

## ೧ನೆಯ ಅಧ್ಯಾಯವು.

ಶ್ರೀಪತಿರ್ಭೃಗುಣಾ ಸರ್ವಲೋಕೋತ್ಕೃಷ್ಟ ಇತೀರಿತಃ ।
ಗೋಕ್ಷೀರಸಿಕ್ತಸರ್ವಾಂಗೋ ವಲ್ಮೀಕಸ್ಥಃ ಶುಭಂ ದಿಶೇತ್ ॥

**ರಾಗ ಸೌರಾಷ್ಟ್ರ, ತ್ರಿಪುಟತಾಳ.**

ಶ್ರೀಸಹಿತ ಶ್ರೀವೆಂಕಟೇಶಗೆ ಸಾಸಿರಾನತಿ ಮಾಡಿ ಬೇಡುವೆ । ಭಾಷೆ ಭಾಷೆಗೆ ಯೆನಗೆ ಬುದ್ಧಿವಿಕಾಸ ಕೊಡು ಯೆಂದು ॥ ಆಶು ಕೊಲ್ಲಾಪುರದ ದೇವಿಗೆ ಬೇಸರದೆ ಕರಮುಗಿದು ಬೇಡುವೆ । ದಾಶರಥಿ ನಿಜದಾಸ ಕಲ್ಲೋಲೀಶಗೊಂದಿಸುವೆ ॥ ೧ ॥ ಶ್ರೀಜಯಾರ್ಯರ ಮೊದಲು ಮಾಡಿ

ರಾಜಗುರುಸಂತತಿಗೆ ನತಿಸುವೆ । ಐಜಿ ವೆಂಕಟರಾಮುವರ್ಯರ ಪೂಜೆ ಯಲ್ಲಿರುವೆ ॥ ಶ್ರೀಜಯಾರ್ಯ ಮುನೀಂದ್ರ ಸೇವೆಗೆ ಈ ಜಗತಿಯಲಿ ಜನಿಸಿ ಅವರಾ । ಪೂಜಿತಾಖ್ಯವು ವಹಿಸಿದವರನ ಪೂಜಿಸುವೆ ಬಿಡದೆ ॥ ॥ ೨ ॥ ನಿತ್ಯದಲಿ ಕೃಷ್ಣಾರ್ಯರೆಂಬುವ ಉತ್ತಮರ ಪದ ಪೊಂದಿ ಆ ಗುರು । ಪುತ್ರರಾಗಿರುವ ವಿಷ್ಣುತೀರ್ಥರನ ನಮಿಸಿ ಮತ್ತೆ ॥ ಸ್ತೋತ್ರವು ರಾಗಿ ಇರುವ ಸಮಸ್ತ ಗುರುಗಳಿಗೊಂದಿಸುತ ಸ । ರ್ವೋತ್ತಮಾನಂ ತಾದ್ರಿರಮಣನ ಮಹಿಮೆ ಪೇಳುವೆನು ॥ ೩ ॥

### ವಚನ.

ಪೂರ್ವದಲಿ ಭೃಗುಮುನಿಗೆ ಸರ್ವಮುನಿಗಳು ಬುದ್ಧಿಪೂರ್ವಕೀಂ ಪೇಳಿದರು ಗರ್ವಾದಿರಹಿತ ಸತ್ವಸರ್ವಗುಣ ಸಂಪೂರ್ಣ ಸರ್ವ ದೇವೋ ತ್ತಮನು ಇವನ್ಯಾರೆಂದು ತಿಳಿ ಸರ್ವ ಲೋಕದಲಿ ॥ ಸರ್ವರಿಗೆ ಹಿತಕ ವ್ಯದುಪೂರ್ವ ವಚನವನು ಕೇಳಿ ಪೂರ್ವದಲಿ ಪೋದ ತನ್ನ ಪೂರ್ವಿ ಕನ ಮನೆಯಲ್ಲಿ ಗರ್ವ ಅವನಲಿ ಕಂಡು ಗರ್ಕನೆ ತಾ ತಿರುಗಿ ಪಾರ್ವ ತೀಶನು ಎಲ್ಲಿ ಇರುವ ನಡದನಲ್ಲಿ ॥ ೧ ॥ ಕೂಡಿ ಪಾರ್ವತಿಯಿಂದ ಕ್ರೀಡೆಯಿಂದಿರುವವನ ನೋಡಿದನು ಆಗಲ್ಲಿ ಪ್ರೌಢೆ ಪಾರ್ವತಿಯು ಮಾತಾಡಿದಳು ನಾಚುತಲಿ ಬೇಡ ಬಿಡು ಪ್ರಾಣೇಶ ನೋಡು ಭೃಗು ಮುನಿ ಬಂದ ಬೇಡಿಕೊಂಬುವೆನೂ ॥ ಗಾಢನೆ ಕಣ್ಕೆಂಪು ಮಾಡಿ ಮುನಿ ಯಿದ್ದಲ್ಲಿ ಓಡಿಬಂದನು ಆಗ ನೋಡಿ ಭೃಗು ಶಾಪ ಈಡಾಡಿದನು ನಿನ್ನ ಪೂಜೆಯು ಬೇಡ ಈ ಲೋಕದಲಿ ನೋಡಿ ಲಿಂಗವ ಪೂಜೆ ಮಾಡಲೀ ಜನರೂ ॥ ೨ ॥ ಕೊಟ್ಟು ಈಪರಿ ಶಾಪ ಮೆಟ್ಟಿದನು ವೈಕುಂಠ ಥಟ್ಟನೇ ಮತ್ತಲ್ಲಿ ಧಿಟ್ಟ ದೇವನ ಕಂಡ ಪಟ್ಟದರಸಿಯು ಕೂಡಿ ಧಿಟ್ಟಾಗಿ ಮಲ ಗಿರಲು ಸಿಟ್ಟಲೊದ್ದನು ಒಳ್ಳೆ ಪೆಟ್ಟು ಅವನೆದೆಗೆ ॥ ಪೆಟ್ಟು ತಾಗಲು ನೋಡಿ ಥಟ್ಟನೆ ಹರಿಯದ್ದು ಬಿಟ್ಟು ಮಂಚವನಿಳಿದು ಮುಟ್ಟಿ ಮುನಿ ಪಾದವನು ಇಟ್ಟು ಶಿರವನು ಅಲ್ಲಿ ಗಟ್ಟಿ ಆಲಿಂಗನವ ಕೊಟ್ಟು ಮಾತಾ ಡಿದನು ತುಷ್ಟನಾಗೀ ॥ ೩ ॥



### ರಾಗ ಶಂಕರಾಭರಣ, ಅಟತಾಳ.

ಯಾಕೆನ್ನ ಮೇಲಿಷ್ಟು ಸಿಟ್ಟೊ । ಭೃಗುಮುನಿ । ಯಾಕೆನ್ನ ಮೇಲಿಷ್ಟು ಸಿಟ್ಟೊ ॥ ನಾ ಕೊಡುವೆನು ನಿನಗೀ ಕಾಲಕೆ ನೀ । ಬೇಕಾದ್ದು ಬೇಡು ಯಥೇಷ್ಟ ॥ ಪಲ್ಲ ॥ ಸದ್ದು ಇಲ್ಲದೆ ನಾ ಇದ್ದ ಮನೆಗೆ ಬಂದು । ಒದ್ದ ಕಾರಣ ಪೇಳಿಷ್ಟು ॥ ಸಿದ್ಧಾಗಿ ನೀನು ಬಂದದ್ದು ನಾ ಅರಿಯೆನು । ಬುದ್ಧಿ ತಪ್ಪಿತು ಕ್ಷಮಿಸಿಷ್ಟೂ ॥ ೧ ॥ ಚಂದಾಗಿ ಕಾಠಿಣ್ಯದಿಂದಿದ್ದ ಯೆನ್ನೆದೆ । ನೊಂದಿಲ್ಲ ಯೆಳ್ಳಕಾಳಷ್ಟು ॥ ಇಂದು ಈ ಕೋಮಲ ಸುಂದರ ಪಾದವು । ನೊಂದುಕೊಂಡಿದ್ದಾವು ಯೆಷ್ಟೊ ॥ ೨ ॥ ಧರೆಯೊಳು ದ್ವಿಜ ರಿಗೆ ಸರಿ ಯಾರು ಇಲ್ಲೆಂದು । ಬರುವದು ಭಯ ಬಾಳಷ್ಟು ॥ ವರದಾ ನಂತಾದ್ರೀಶ ಪರಮ ಭಕ್ತರಿಗೆ । ಬರಬಾರದೆಂದೀಗು ಸಿಟ್ಟೊ ॥ ೩ ॥

### ವಚನ.

ಇಂದಿರಾಪತಿಯು ಹೀಗೆಂದು ಮುನಿಪಾದಗಳ ಚಂದದಲಿ ಒತ್ತಿ ತ್ವರದಿಂದ ಉಷ್ಣೋದಕವ ತಂದು ತೊಳೆಯುತ ಭಕ್ತಿಯಿಂದ ಶಿರದಲಿ ವಹಿಸಿ ಇಂದು ಪಾವಿತನಾದೆನೆಂದ ಹರುಷದಲೀ ॥ ಮುಂದೆ ಭೃಗು ಮುನಿಯು ಮುಕುಂದನ ಕೊಂಡಾಡಿ ಬಂದ ಹರುಷದಲಿ ಅಲ್ಲಿಂದ ಭೂಲೋಕದಲಿ ಇಂದಿರೇಶನೆ ಸರ್ವರಿಂದಧಿಕ ಸತ್ಯ ತಿಳಿರೆಂದ ಮುನಿ ಗಳಿಗೆಲ್ಲ ಮುಂದೆ ವೈಕುಂಠದಲಿ ಇಂದಿರಾದೇವಿ ಗೋವಿಂದನಾಟವ ಕಂಡು ಅಂದಳೀ ಪರಿಯು ॥ ೧ ॥

### ರಾಗ ಮೋಹನಕಲ್ಯಾಣಿ, ಆದಿತಾಳ.

ಹರಿಯೆ ಪೋಗುವೆ ನಾನು । ಮು । ನ್ನಿರುತಿರು ಒಬ್ಬನೆ ನೀನೂ ॥ ತಿರುಕನಾಗಿ ಇರುತಿರುವ ಭೂಸುರನು । ಭರದೊಳೊದ್ದ ನಿನ್ನಿರಿಯಾ ತನೇನೂ ॥ ಪಲ್ಲ ॥ ನಿನ್ನಾ ಶ್ರೀವತ್ಸವಿದು । ಬಹು । ಮಾನ್ಯಾವು ಎಂದೆನಿಸುವದೂ ॥ ಎನ್ನ ಆಲಿಂಗನವನ್ನು ಕೊಂಬುವದು । ಇನ್ನು ಈ ಸ್ಥಳವು ಅಮಾನ್ಯವಾಗಿಹುದೂ ॥ ೧ ॥ ಬಡವ ಬ್ರಾಹ್ಮಣರಿಂದ ।

ನೀ ಕಡೆಗೆ ಕೂಡಿರು ಚಂದಾ ॥ ಮಡದಿಯ ಹಂಬಲ ಬಿಡು ದೂರ ದಿಂದ । ತಡಮಾಡದೆ ನಾ ನಡದೆ ಗೋವಿಂದಾ ॥ ೨ ॥ ಇನ್ನೆನ್ನಾ ಗೊಡವ್ಯಾಕೆ । ಬಿಡು । ನಿನ್ನ ಸಂಗತಿ ಸಾಕೊ ॥ ಎನ್ನ ವೈರಿಗಳ ಮನ್ನಿಸ್ವ್ಯಾಕೊ । ನನ್ನಿಚ್ಛೆಲಿ ನಾ ಇನ್ನಿರಬೇಕೋ ॥ ೩ ॥ ಹಿಂದಕೆ ಕುಂಭೋದ್ಭವನು । ಎನ್ನ । ತಂದೆಯ ನುಂಗಿದ ತಾನೂ ॥ ಮುಂದೆ ಮೂತ್ರ ಭರದಿಂದ ಬಿಟ್ಟಿಹನು । ಅಂದಿಗೆ ಎನಗಾನಂದವು ಯೇನೂ ॥ ॥ ೪ ॥ ಮತ್ತೆನ್ನ ಸೊಸೆಗವರು । ಬಹು । ಭಕ್ತಿಲಿ ಪೂಜಿಸುವವರೂ ॥ ನಿತ್ಯ ನಾಲಿಗೆಯಲಿ ಪೊತ್ತುಕೊಂಡಿಹರು । ಮತ್ತೆ ವೈರಿಯವರ್ಹೊರತು ಇನ್ಯಾರೂ ॥ ೫ ॥ ಹುಡುಗಬುದ್ಧಿಯು ಎಂದು । ನಾ । ಕಡೆಗೆ ಬಲ್ಲೆನು ನಿಂದೂ ॥ ಮಡುವು ಧುಮುಕೀ ಕಾಲ್ಪಿಡೆಯ ಮೆಟ್ಟಿದುದು । ಪಿಡಿದು ಭೂಮಿಯ ಕಂಭ ಒಡೆದು ಬಂದಿಹುದೂ ॥ ೬ ॥ ಬಡವ ಬ್ರಾಹ್ಮಣ ನಾದಿ । ಚಾಪ । ಕೊಡಲಿಯ ಕೈಯಲಿ ಪಿಡಿದೀ ॥ ಮಡದಿಯ ಕಳ ಕೊಂಡು ತುಡುಗ ನೀನಾದಿ । ಹಿಡಿದು ಬತ್ತಲೆ ಖೊಟ್ಟಿ ಕಡವನೇ ರಿದೀ ॥ ೭ ॥ ಎಷ್ಟು ಪೇಳಲಿ ನಿನಗೆ । ನೀ । ನೆಷ್ಟು ಮಾಡಿದಿ ಹೀಗೇ ॥ ಅಷ್ಟು ಮನಸಿನೊಳಗಿಟ್ಟೇನು ಆಗ । ಕಟ್ಟಕಡೆಗೆ ಬಲು ಸಿಟ್ಟು ಬಂತೆ ನಗೇ ॥ ೮ ॥ ಎಲ್ಲರಿಗುತ್ತಮ ನೀನು । ಎಂ । ದಿಲ್ಲಿದ್ದೆ ಮೋಹಿಸಿ ನಾನೂ ॥ ಒಲ್ಲೆ ಇನ್ನ ಕರವೀರದೊಳಿರುವೆನು । ಬಲ್ಲಿದನಂತಾದ್ರಿಯೊಳಿರು ನೀನೂ ॥ ೬ ॥

## ರಾಗ ಸಾರಂಗ, ಆದಿತಾಳ.

ಸಿರಿದೇವಿಯು ಹರಿ ಕೂಡೀ ಪರಿ ಮಾಡಿ ಕಲಹಾ । ತ್ವರದಿಂದ ನಡೆದಾಳು ಕರವೀರಪುರಕೆ ॥ ಪರಮಾತ್ಮನು ತಾ ಮುಂದೀ ಪರಿ ಚಿಂತಿ ಸುತಿಹನೂ । ಸಿರಿಯಿಲ್ಲದ ವೈಕುಂಠ ಸರಿಬಾರದು ಯೆನಗೆ ॥ ೧ ॥ ಏನು ಮಾಡಲಿ ಲಕ್ಷ್ಮೀಹೀನನಾದೆನು ನಾನೂ । ದೀನನಾದೆನು ಹಾ ನನ್ನೊಳು ನಾನೆ ನೊಂದೂ ॥ ಪ್ರಾಣದರಸಿಯ ನಾನು ಕಾಣುವೆನೆಂದು । ಪ್ರಾಣ ನಿಲ್ಲದು ಪಟ್ಟದ ರಾಣಿಯ ಬಿಟ್ಟೂ ॥ ೨ ॥ ಇನ್ಯಾಂಗೆ ಇರಲಿ ನಾ ಇನ್ನಾಕೆಯ ಹೊರ್ತು । ಕಣ್ಣಿಗೆ ವೈಕುಂಠಾರಣ್ಯ ತೋರುವದು ॥



ಇನ್ನೆಲ್ಲ್ಹೋಗಲಿ ಎಂದು ಚನ್ನಾಗಿ ತಿಳಿದು । ಮುನ್ನ ಧರೆಯಲಿ ಬಂದ ತನ್ನಿಂದೆ ತಾನೂ ॥ ೩ ॥ ಶ್ರೀವೈಕುಂಠಕಿಂತ ಶ್ರೀವೆಂಕಟಗಿರಿಯು । ಕೇವಲಾಧಿಕವೆಂದು ಭಾವಿಸೀ ಪರಿಯು ॥ ಆವತ್ತಿಗೆ ಬೇಗಲ್ಲೇ ತಾ ವಾಸಕೆ ನಡೆದಾ । ದೇವ ತಿಂತ್ರಿಣಿಯೆಂಬೊ ಆ ವೃಕ್ಷವ ಕಂಡಾ ॥ ೪ ॥ ಅಲ್ಲೊಂದು ಇರುವದು ಬಲ್ಲಿದ ಹುತ್ತ । ಅಲ್ಲಿ ತಾ ಅಡಗಿದಾ ಮೆಲ್ಲಾನೆ ಪೋಗೀ ॥ ಅಲ್ಯಾ ದೇಶದಲ್ಯೊಬ್ಬ ಚೋಳಾಖ್ಯನು ರಾಜಾ । ಯೆಲ್ಲ ರಿಂದಲಿ ತನ್ನ ಪುರದಲ್ಲೆ ಇರುವಾ ॥ ೫ ॥ ಅವನ ಮನೆಯಲಿ ಬಂದಾ ಭುವನಾಧಿಕ ಬ್ರಹ್ಮಾ । ಶಿವನ ಕರುವಿನ ಮಾಡಿ ತಾನಾಕಳುವಾಗಿ ॥ ಅವನ ತಾಯಿಯು ಲಕ್ಷ್ಮೀ ಅವನ ಮಾರಿದಳು । ಅವಳು ಬೇಡಿದ್ದು ಕೊಟ್ಟು ಅವನೀಶ ಕೊಂಡಾ ॥ ೬ ॥ ಕರಸಿಕೊಂಡಷ್ಟು ಹಾಲು ಕರೆವುದು ನಿತ್ಯಾ । ವರ ಸಾಧುಗುಣದಿಂದ ಇರುತಿಹುದು ಮತ್ತೆ ॥ ಎರಡು ಸಾವಿರ ಗೋವುಗಳ ಸರಸಾಗಿ ಕೂಡಿ । ಚರಿಸಿಬರುವುದು ವೆಂಕಟಗಿರಿಗ್ಹೋಗಿ ನಿತ್ಯಾ ॥ ೭ ॥ ಮುಂದಾ ಧೇನುವು ಧ್ಯಾನಕ್ಕೆ ತಂದು ನಾ ಇಲ್ಲಿ । ಬಂದ ಕಾರಣವೇನು ಎಂದು ಸ್ಮರಿಸುತಲಿ ॥ ಇಂದಿರೇಶಗೆ ಭಕ್ತಿಯಿಂದ ಕ್ಷೀರವನು । ಚಂದಾಗಿ ಕರೆವುದು ಬಂದು ಹುತ್ತಿನಲಿ ॥ ೮ ॥ ಹಿಂಡಾಕಳುಗಳ ಕೂಡಿಕೊಂಡು ಬರುವದು । ಹಿಂಡದು ತನ್ನ ಕರುವಿನ ಕೊಂಡು ಒಂದಿನವು ॥ ಕಂಡು ಈ ಪರಿ ರಾಜನ ಹೆಂಡತಿಯು ಆಗ । ಚಂಡ ಕೋಪದಿ ಗೋಪನ ಕಂಡಂದಳು ಹೀಗೆ ॥ ೯ ॥

## ವಚನ.

ಏನು ಎಲೆ ಗೋಪಾಲ ಧೇನುವಿನ ಪಾಲ ನೀ ಏನು ಮಾಡುವಿ ನಿತ್ಯ ನೀನೆ ಕೊಂಬುವಿಯೊ ಅಥವಾ ತಾನೆ ಕುಡಿವುದೊ ವತ್ಸೇನು ಮಾಡುವದು ಬೇಗನೆ ಪೇಳೀಗ ನಾನು ಒಳ್ಳೆವಳಲ್ಲ ಪ್ರಾಣ ಕೊಂಬುವೆನು ॥ ಧೇನುಪನು ಈ ಮಾತು ಮೌನದಿಂದಲಿ ಕೇಳಿ ತಾನು ಗಾಬರಿಗೊಂಡು ಏನು ಬಂತಿದು ಎನಗೆ ಏನುಮಾಡಲಿ ಎಂದು ಧ್ಯಾನಿಸುತ ಆ ರಾಜಮಾನಿನಿಗೆ ನುಡಿದ ಬಹು ದೀನನಾಗೀ ॥ ೧ ॥


Rarest Archiver

## ರಾಗ ದೇಶಿ, ಅಟತಾಳ.

ಅರಿಯೆ ನಾನವ್ಮಾ ನಿಮ್ಮರಮನೆ ಸುದ್ದಿಯನು ॥ ಅರಿಯೆ ॥ ತುರುಗಳ ಕಾದ್ಕೊಂಡು ಬರುವೆ ನಾ ಇದಹೊರ್ತು ॥ ಪಲ್ಲ ॥ ಕರಸಿ ಕೊಂಬುವರ್ಯಾರೊ ಕರುವನು ಕಟ್ಟುವರ್ಯಾರೋ ॥ ಅರಿಯೆ ॥ ಬರಿದೆ ನೀ ಯೆನ್ನ ಮೇಲೆ ಹರಿಹಾಯುವದ್ಯಾಕೆ ॥ ಅರಿಯೆ ॥ ೧ ॥ ಕರುವು ತಾನುಂಬೋದೊ ಪರರ ಪಾಲಾಗುವದೋ ॥ ಅರಿಯೆ ॥ ಸರಸಾಗಿ ತಿಳಿ ನೀನು ನೆರೆಹೊರೆಯವರನಾ ॥ ಅರಿಯೆ ॥ ೨ ॥ ಕಳ್ಳತನವ ಮಾಡಿ ಸುಳ್ಳು ಮಾತಾಡೋದು ॥ ಅರಿಯೆ ॥ ಬಲ್ಲಿದಾನಂತಾದ್ರಿವಲ್ಲಭ ತಾ ಬಲ್ಲಾ ॥ ಅರಿಯೆ ನಾನವ್ಮಾ ॥ ೩ ॥

## ವಚನ.

ಪಟ್ಟದರಸಿಯು ಗೋಪನಷ್ಟು ಮಾತನು ಕೇಳಿ ಶಿಟ್ಟು ಸಹಿಸದೆ ಕ್ರೂರ ದೃಷ್ಟಿಯಿಂದಲಿ ನೋಡಿ ಇಷ್ಟು ಮಾತಿವಗ್ಯಾಕೆ ಕುಟ್ಟಿರೆನ್ನುತ ಒಳ್ಳೆ ಗಟ್ಟಿ ಚಬುಕಿಲಿ ಬಹಳ ಪೆಟ್ಟು ಹೊಡಿಸಿದಳೂ ॥ ಪೆಟ್ಟಿಗಂಜುತ ಗೋಪ ಥಟ್ಟನೆ ಮರುದಿನವು ಕಟ್ಟಿದಾಕಳ ಕಣ್ಣಬಿಟ್ಟು ಬೆನ್ಹತ್ತಿದನು ಬಿಟ್ಟಂಥ ಆಕಳವು ನೆಟ್ಟನೆ ಗಿರಿಗ್ಹೋಗಿ ಬಿಟ್ಟಿತಾ ಹುತ್ತಿನಲಿ ಅಷ್ಟು ಪಾಲನೂ ॥ ೧ ॥ ಶಿಟ್ಟಿಲದರ ನೋಡಿ ದುಷ್ಟ ಗೋಪಾಲ ತಾ ಮುಟ್ಟಿ ಕೊಡಲಿಯ ಯೆತ್ತಿ ಕುಟ್ಟುವ ಸಮಯದಲಿ ಥಟ್ಟನೆ ಹರಿಯು ಆ ಪೆಟ್ಟು ತನ್ನಲಿ ಕೊಂಡ ದೃಷ್ಟಿಂದ ತನ್ನವರ ಕಷ್ಟ ನೋಡದಲೆ ಸೃಷ್ಟಿ ಕರ್ತನ ಶಿರದಿ ತಟ್ಟಿ ॥ ಪುಟ್ಟಿತು ರಕ್ತ ನೆಟ್ಟನೆ ಏಳು ತಾಳವೃಕ್ಷ ಪರಿಮಿತಿಯಾಗಿ ಎಷ್ಟೊಂದು ಭೀತಿಕರ ಶ್ರೇಷ್ಠ ಶಬ್ದವಾದುದು ಅಷ್ಟು ನೋಡುತ ಪ್ರಾಣ ಬಿಟ್ಟ ಗೋಪಾಲ ॥ ೨ ॥ ಮುಂದಕಾಕಳು ಗಿರಿಯಿಂದ ಧರೆಗಿಳಿವುತಲೆ ಬಂದು ರಾಜನ ಸಭೆಯ ಮುಂದೆ ಹೊರಳಾಡುವುದು ಮುಂದೆ ನೃಪ ಕಂಡು ಹೀಗೆಂದ ಈ ಪರಿ ಯಾಕೆ ಹೊಂದಗೂಡಿಸಿಡಿರಿ ಗೋವೃಂದದೊಳಗಿದನೂ ॥ ಅಂದ ನುಡಿ ಕೇಳಿ ಅಲ್ಲಿಂದ ಪರಿಚಾರಕನು ಮುಂದಕಾಕಳ ನಡಿಸಿ ಹಿಂದೆ ತಾ ಹೋಗುತಲೆ ಅಂದಿಗಲ್ಲಾದದ್ದು



ಚಂದದಲಿ ನೋಡಿ ಭಯದಿಂದ ಅರಸಗೆ ಓಡಿಬಂದು ಪೇಳಿದನೂ ॥ ॥ ೩ ॥ ಅರಸ ಕೇಳುತ ಬೇಗ ತರಿಸಿ ನರಯಾನವನು ವಿರಸದಿಂದಲಿ ಕುಳಿತು ಕರಿಸಿ ಸೈನ್ಯವನೆಲ್ಲ ಚರಿಸುತಲೆ ಆ ರಕ್ತ ಸುರಿಸುವ ಸ್ಥಳ ನೋಡಿ ಸ್ಮರಿಸಿ ತಿಳಿಯದೆ ದಣಿದು ವರಸಿದನು ಬೆವರು ॥ ಅರಸು ಬಂದದ್ದು ನೋಡಿ ಸರಸಿಜೋದ್ಭವಪಿತನು ಸರಸರನೆ ಹೊರಗ್ಹೊರಟ ವರಸರ್ಪ ಬಂದಂತೆ ಶಿರಸಿನಲಿ ಅಂಗೈಯನಿರಿಸಿ ಘಾಯವನೊತ್ತಿ ಸುರಿಸುತಲೆ ಕಣ್ಣೀರು ವರಸುತಲೆ ನುಡಿದಾ ॥ ೪ ॥

## ರಾಗ ನೀಲಾಂಬರಿ, ಅಟತಾಳ.

ಕೇಳು ನೀ ಯೆಲೋ ಪಾಪೀ । ಚೋಳರಾಜನೆ ಇದನು ॥ ಹೇಳ ಕೇಳದ ಇಂಥಾ । ವೇಳೆಯು ಬಂತೆನಗೆ ॥ ಪಲ್ಲ ॥ ಮಂದಮತಿಯೆ ನೀ ಮದಾಂಧನಾಗಿರುವಿಯೊ । ಇಂದು ಬಡವರ ಸುದ್ದಿ ಒಂದು ಬಲ್ಲೇನೋ ॥ ತಂದೆತಾಯಿಗಳಿಲ್ಲ ಬಂಧುಬಳಗವಿಲ್ಲಾ । ಇಂದು ಯೆನಗಾರಿಲ್ಲವೆಂದು ಮಿಡುಕುವೇನೋ ॥ ೧ ॥ ಎಡತೊಡೆಯಲಿ ಒಪ್ಪುವ ಯೆನ್ನ ಮಡದಿಯು ಯೆನ್ನನು ಬಿಟ್ಟು । ಸಿಡಿದು ಸಿಟ್ಟಿಲಿ ದೂರ ನಡದಳು ನಾ ಇಲ್ಲೇ ॥ ಗಿಡದಾಶ್ರಯದಲಿರುತಿರಲು ಬಿಡದೆ ನಿನ್ನ ಗೋಪಾಲಾ । ಕೊಡಲಿಯ ಪಿಡಿದು ಎನ್ನ ತಲೆ ಒಡದನಯ್ಯಯ್ಯೋ ॥ ೨ ॥ ಲೇಪಿಸಿ ಮೈಯಲಿ ರಕ್ತವು ವ್ಯಾಪಿಸಿತಾನಂತಾದ್ರಿ । ಈ ಪರಿ ದುಃಖವ ನಾನು ನಿರೂಪಿಸಲಿನ್ನೆಷ್ಟು ॥ ತಾಪಸರೊಡೆಯನು ನಾ ಸಂತಾಪಿಸುತಲೆ ನಿನ್ನೊಳು । ಕೋಪಿಸಿ ದುಃಖವ ಸಹಿಸದೆ ಶಪಿಸುವೆನು ಬಿಡದೇ ॥ ೩ ॥

## ರಾಗ ಯೆರಕಲಕಾಂಬೋಧಿ, ಬಿಲಂದಿತಾಳ.

ಹಾ ಚೋಳಾಧಿಪನೆ ಕಲಿ ಆಚರಿಸುವ ಪರ್ಯಂತ । ನೀ ಚರಿಸುತಿರು ಹೋಗು ಪಿಶಾಚನು ಆಗಿನ್ನೂ ॥ ಈ ಚಂಡಾಗಿಹ ಶಾಪವು ತಾ ಚಿತ್ತಿಡುತ ಕೇಳಿ । ಆ ಚೋಳಾಧಿಪ ಬಿದ್ದನು ಮೂರ್ಛಿತನಾಗ್ಯಲ್ಲೇ ॥ ॥ ೧ ॥ ಎರಡು ಗಳಿಗೆಯ ಮೇಲೆ ಸ್ಮರಣೆಯಿಂದಲೆ ಯೆದ್ದು । ತರತರನೆ ನಡುಗುತ ಈ ಪರಿ ಮಾತಾಡಿದನೂ ॥ ಹರಿಯೆ ನೀ ಯೆನಗ್ಯಾಕೆ ಈ ಪರಿ


Rarest Archiver

ಶಾಪವ ಕೊಡುವಿ । ಅರಿತು ಯೆನ್ನಪರಾಧವ ಇರುವದು ಏನ್ಹೇಳೋ ॥
॥ ೨ ॥ ಈ ಪರಿ ಮಾತನು ಕೇಳಿ ಆ ಪರಮಾತ್ಮನು ಆಗ । ಪಾಪಿಗಳನು
ಮೋಹಿಸುತಲಿ ಈ ಪರಿ ತಾ ನುಡಿದಾ ॥ ನಾ ಪಾಪೀ ನಾ ಖಳ ಮುಂ
ಗೋಪೀ ನಾ ನಿನಗೀಗ । ಶಾಪಿಸಿ ತಿಳಿಯದೆ ಪಶ್ಚಾತ್ತಾಪವ ಪಡು
ವೆನೂ ॥ ೩ ॥ ನೆತ್ತಿಯ ಘಾಯಕೆ ನಾ ಮೈಮರೆದು ಪರವಶನಾಗೀ ।
ವ್ಯರ್ಥ ಶಾಪವ ಕೊಟ್ಟೇಹೊತ್ತು ಅಯ್ಯಯ್ಯೋ ॥ ಸತ್ಯಸಂಕಲ್ಪಕ್ಕೆ
ಮತ್ತುಪಾಯುವು ಇಲ್ಲಾ । ಮಿಥ್ಯವಾಗದು ಶಾಪ ಸತ್ಯವು ತಿಳಿ ನೀನು ॥
॥ ೪ ॥ ಆಕಾಶರಸನು ಕನ್ಯಾ ತಾ ಕೊಡುವನು ಮುಂದೆನಗೆ । ಶ್ರೀಕರ
ಪದ್ಮಾವತಿ ಯೆಂದಾಕೆಯ ನಾಮವಿದೂ ॥ ಆ ಕಾಲಕೆ ತಿಳಿ ಮತ್ತೆ
ನಾನಾ ರತ್ನಗಳುಳ್ಳ । ಶ್ರೀಕಿರೀಟವ ಕೊಡುವ ತೂಕವು ಬಹಳದಕೆ ॥
॥ ೫ ॥ ಎಂದಿಗೆ ಶುಕ್ರವಾರ ಬಂದಿಹುದು ನಾ ಬಿಡದೆ । ಅಂದಿಗೆ ಆ
ಕಿರೀಟವು ಚಂದದಿ ಧರಿಸುವೆನೂ ॥ ನೊಂದುತಲಿ ಆಗ ಕಣ್ಣಿಂದ
ತುಳುಕಲು ನೀರೂ । ಅಂದಾರುಗಳಿಗೆ ಆನಂದವಾಗಲಿ ನಿನಗೆ ॥ ೬ ॥
ಹೀಗೆಂದಾತನ ಕಳುಹಿ ಆಗಾನಂತಾದ್ರೀಶ । ಹೀಗೆಂದು ತನ್ನ ಮನದಲಿ
ಚಿಂತಿಸಿದಾ ॥ ಈ ಘಾಯುವು ಮುಂದಿನ್ನು ಹ್ಯಾಗೆ ಮಾಯುವದೆಂದು ।
ಆಗಲ್ಲೆ ಸ್ಮರಿಸಿದನು ಬೇಗ ಬೃಹಸ್ಪತಿಯಾ ॥ ೭ ॥

## ವಚನ.

ಬಂದನಾ ದೇವಗುರು ಇಂದ್ರಲೋಕವ ಬಿಟ್ಟು ಅಂದಿಗಾಕ್ಷಣ
ಹರಿಗೆ ಅಂದನೀಪರಿ ತಾನು ಇಂದಿರೇಶನೆ ನೀನು ಇಂದೆನ್ನ ಕರೆದ್ಯಾಕೆ
ಮುಂದೆ ಕಾರ್ಯಗಳೇನು ಚಂದದಲಿ ಪೇಳೋ ॥ ಅಂದಮಾತನು ಕೇಳಿ
ಹಿಂದಾದ ವೃತ್ತಾಂತ ಚಂದದಲಿ ತಿಳಿಸಿ ಹೀಗೆಂದು ನುಡಿದನು ಮತ್ತೆ
ಒಂದೊಂದು ಹೀಗೆ ನೂರೊಂದು ಮಾತುಗಳ್ಯಾಕೆ ಮುಂದೆ ತಲೆಗೌಷ
ಧವು ಇಂದು ಪೇಳೆನಗೆ ॥ ೧ ॥ ಉತ್ತಮಾಗಿರಬೇಕು ನೆತ್ತಿಗ್ಹಿತಕರವಾಗಿ
ಮತ್ತೆ ಸುಲಭಿರಬೇಕು ಸತ್ಯ ನೀ ಪೇಳು ದುಡ್ಡೆತ್ತಿಕೊಡುವಂಥಾದ್ದು
ಮತ್ತೆ ಪೇಳಲುಬೇಡ ವಿತ್ತ ಯೆನ್ನಲಿ ಇಲ್ಲ ಅತ್ಯಂತ ರಿಕ್ತಾ ॥ ಉತ್ತರಕೆ



ಹೀಗೆ ಪ್ರತ್ಯುತ್ತರವ ನುಡಿದ ಗುರು ಉತ್ತಮನೆ ನೀ ಬಹಳ ರಿಕ್ತನಾದರೆ
ಕೇಳು ಅತ್ತಿಯ ಹಾಲೊಳಗೆ ಮತ್ತೆ ಎಕ್ಕೆಯಫಲದ ಹತ್ತಿಯನು ಕೂಡಿ
ಸುತ ಒತ್ತಿ ಗಾಯದಲಿಟ್ಟು ಸುತ್ತ ಮೇಲ್ವಸ್ತ್ರವನು ನಿತ್ಯ ಈ ಪರಿ
ಮಾಡು ಮತ್ತೇನು ಬೇಡಾ ॥ ೨ ॥ ಇಂಥ ಔಷಧಿಗೆ ಇದರಂತೆ ಪೇಳುವೆ
ಪಥ್ಯ ಶಾಂತಸಾಮೆಯ ಅನ್ನ ಜೇನ್ತುಪ್ಪ ಸ್ವೀಕರಿಸು ಇಂಥ ಘಾಯಕೆ
ನೀನು ಚಿಂತೆಮಾಡಲು ಬೇಡ ಶಾಂತವಾಗುವದಯ್ಯ ಶಾಂತಮೂರು
ತಿಯೇ ॥ ಇಂಥ ಮಾತಿಗೆ ಹರಿಯು ಸಂತೋಷ ತಾ ಪಟ್ಟು ಅತ್ಯಂತ
ತಲೆದೂಗಿ ಯೆನ್ನಂತರಂಗಕೆ ಒಪ್ಪುವಂಥಾದ್ದು ಪೇಳಿದಿ ಯೆಂತ ಸ್ತುತಿ
ಸ್ಯವನು ಆದರಂತೆ ಮಾಡುತಲೆ ತಾ ನಿಂತ ಗಿರಿಯಲ್ಲೇ ॥ ೩ ॥ ಹುತ್ತವೆ
ಕೌಸಲ್ಯೆ ತಿಂತ್ರಿಣಿಯು ದಶರಥನು ಮತ್ತೆ ಶೇಷಾದ್ರಿ ಸೌಮಿತ್ರಿಯೆಂದೆನಿ
ಸುವನು ಸುತ್ತ ವೆಂಕಟಗಿರಿಯು ಉತ್ತಮಾಯೋಧ್ಯ ಸರ್ವೋತ್ತಮನು
ತಾ ರಾಮಮೂರ್ತಿ ಆಗಿರುವಾ ॥ ಹುತ್ತವೆ ದೇವಕಿಯು ತಿಂತ್ರಿಣಿಯು
ವಸುದೇವ ಮತ್ತೆ ಶೇಷಾದ್ರಿ ಬಲಭದ್ರನೆಂದೆನಿಸುವನು ಸುತ್ತ ವೆಂಕಟ
ಗಿರಿಯು ಉತ್ತಮಾ ಮಧುರೆ ಸರ್ವೋತ್ತಮನು ತಾ ಕೃಷ್ಣಮೂರ್ತಿ
ಆಗಿರುವಾ ॥ ೪ ॥ ಸ್ವಾಮಿಪುಷ್ಕರಣಿಯೆ ನಾಮದಿಂದಲಿ ಯಮುನೆ ಆ
ಮಹಾ ಯಾದವಸ್ತೋಮವೆ ಮೃಗವೃಂದ ಕಾಮಚರ ಧೇನುಗಳು
ನೇಮದಲಿ ಗೋಪಿಯರು ತಾ ಮಹಾ ಗೋಪಾಲನಾಮದಿಂದಿರುವಾ ॥
ಆ ಮುಕ್ತಬ್ರಹ್ಮಾದಿಸ್ತೋಮ ಮೃಗಪಕ್ಷಿಗಣ ಆ ಮಹಾವಾನರಸ್ತೋಮ
ಸನಕಾದಿಗಣ ಪ್ರೇಮಕರ ಗಿರಿರಾಜ ಭೂಮಿಯಲಿ ವೈಕುಂಠ ಶ್ರೀಮಹಾ
ಲಕ್ಷ್ಮೀಶ ತಾ ಮುಕ್ತಿಗೊಡೆಯಾ ॥ ೫ ॥ ಇಂದಿರೇಶನು ಹೀಗೆ ಒಂ
ದೊಂದು ವರರೂಪದಿಂದ ಬ್ರಹ್ಮಾದಿ ಸುರವೃಂದವನು ಕೂಡಿ ಆನಂದ
ದಿಂದಾಡುವನು ಮುಂದೆ ಪರಿಮಿತಿ ಇಲ್ಲವೆಂದು ಆತನ ಸ್ಮೃತಿಗೆ ತಂದು
ನಮೋ ಯೆಂಬೆ ॥ ಚಂದಾದ ವೈಕುಂಠಮಂದಿರವು ಬಿಟ್ಟು ಸುರವಂದಿ
ತಾನಂತಾದ್ರಿ ಮಂದಿರವ ಮಾಡಿ ಬಹು ಮಂದಿಯನು ಸಲಹುವಾನಂದ
ಮೂರುತಿಯ ದಯದಿಂದ ಮುಗಿಯಿತು ಇಲ್ಲಿಗೊಂದು ಅಧ್ಯಾಯ ॥ ೬ ॥

**೧ನೆಯ ಅಧ್ಯಾಯವು ಸಂಪೂರ್ಣವು.**


Rarest Archiver

॥ ಶ್ರೀಭೂವರಾಹಾತ್ಮಕಾಯ ನಮಃ ॥

# ಎರಡನೆಯ ಅಧ್ಯಾಯವು.

---

ಸ್ವಾತ್ಮನಾಪಿ ವರಾಹೇಣ ದತ್ತವಾಸಸ್ಥಳೋಽಚ್ಯುತಃ ।
ಮಾಯಾವೀ ಬಕುಲಾಲಾಭತುಷ್ಟೋಽವ್ಯಾದ್ವೆಂಕಟೇಶ್ವರಃ ॥

## ರಾಗ ಸೌರಾಷ್ಟ್ರ, ತ್ರಿಪುಟತಾಳ.

ಒಂದು ದಿನ ವೆಂಕಟಪತಿಯು ತ್ವರದಿಂದ ಅರುಣೋದಯದಲಿದ್ದನು । ಮುಂದಕೌಷಧವನ್ನು ತರಬೇಕೆಂದು ತೆರಳಿದನೂ ॥ ಅಂದಿಗಲ್ಲಿ ಭೂವರಾಹನು ಬಂದು ಗರ್ಜನಮಾಡುತಿದುರಿಗೆ । ಮುಂದಕಲ್ಲೆ ಅಡಗಿದನು ಭಯದಿಂದ ವೆಂಕಟನೂ ॥ ೧ ॥ ಚಂದದಲಿ ಅಡಗಿರುವ ದೇವನ ಬಂದು ಪಿಡಿದನು ಭೂವರಾಹನು । ಮಂದಜನರನೆ ಮೋಹಿಸುತ ಹೀಗೆಂದ ವೆಂಕಟಗೇ ॥ ಇಂದು ನೀನ್ಯಾರೆಲೊ ನರಾಧಮ ಬಂದ ಕಾರಣವೇನು ಇಲ್ಲಿಗೆ । ಮುಂದೆ ಪೋಗುವಿ ಯೆಲ್ಲಿ ನೀ ಯೆನ್ನ ಮುಂದೆ ನುಡಿ ಬೇಗಾ ॥ ೨ ॥ ಮಾತ ಕೇಳುತಲೀ ಪರಿಯು ಬಹು ಸೋತು ಮಾತಾಡಿದನು ವೆಂಕಟ । ಮಾತುಮಾತಿಗೆ ಉಸುರುಗಳೆವುತ ಆತುರನ ಪರಿಯೂ ॥ ಕೂತು ಪೇಳಿದಾವಾಗ ತನ್ನ ಪುರಾತನದ ಕಥೆಯೆಲ್ಲ ಆತಗೆ । ಈ ತಲೆಯ ಔಷಧಕೆ ಬಂದೆನು ನೀ ತಿಳಿಯೊ ಎಂದಾ ॥ ೩ ॥ ಅಪ್ಪಿಕೊಂಡೀ ಮಾತಿಗವನಾ ಮುಪ್ಪಿನವ ತಾ ಕ್ರೋಡರೂಪಿಯು । ತಪ್ಪದಲೆ ಕಣ್ಣೀರು ಸುರಿಸುತಲಿಪ್ಪ ದುಃಖದಲೇ ॥ ಅಪ್ಪಿಕೊಂಡಿಹ ಭೂವರಾಹನು ಅಪ್ಪ ವೆಂಕಟರಾಯರಿಬ್ಬರು । ಒಪ್ಪಿ ತೋರಿದರಾಗ ಹಾಲಿಗೆ ಹೆಪ್ಪು ಕೊಟ್ಟಂತೇ ॥ ೪ ॥ ತಮ್ಮೊಳಗೆ ತಾವಿಬ್ಬರೂ ತಂತಮ್ಮ ಸುಖದುಃಖಗಳ ಪೇಳುತ । ಸುಮ್ಮನಾಗದೆ ಮತ್ತೆ ನುಡಿದರು ರಮ್ಯವಚನಗಳಾ ॥ ನಮ್ಮ ನಿಮ್ಮಾ ಭೇಟಿ ಇದು ಸಂಭ್ರಮವು ಇಬ್ಬರಿಗೆ ಆಯಿತು ಬಹು ಸಮ್ಮತಾನಂತಾದ್ರಿಯೆಂಬುವ ರಮ್ಯ ಗಿರಿಯಲ್ಲೀ ॥ ೫ ॥





## ರಾಗ ಶಂಕರಾಭರಣ, ಆದಿತಾಳ.

ಮುಂದ್ದಾ ವೆಂಕಟೇಶ ತಾ ಹೀಗೆಂದು ಮಾತನಾಡಿದನು । ನಂದೊಂದು ಮಾತಿರುವದು ಕೇಳೊ ಶ್ರೀಧರಣೀಕಾಂತಾ ॥ ಇಂದು ನಮ್ಮಿಬ್ಬರೊಳಗೆ ಒಂದು ಮಾತು ಉಳಿಯಲಿಲ್ಲಾ । ನಿಂದೊಂದು ಮಾತೇನು ಪೇಳೊ ಶ್ರೀಲಕ್ಷ್ಮೀಕಾಂತಾ ॥ ೧ ॥ ಕಲಿಯುಗ ಪೋಗುವತನಕ ಚಲಿಸದೆ ನಿತ್ತಲ್ಲೆ ಇರುವೆ । ಸ್ಥಳ ಒಂದಿಷ್ಟು ಕೊಡು ನೀ ಯೆನಗೆ ಶ್ರೀಧರಣೀಕಾಂತಾ ॥ ಸ್ಥಳದ ಸುದ್ದಿ ಒಂದು ಬಿಟ್ಟು ಉಳಿದ ಮಾತನಾಡೊ ನೀನು । ತಿಳಿದಿಹುದು ನಿನ್ನ ಬುದ್ಧಿ ಶ್ರೀಲಕ್ಷ್ಮೀಕಾಂತಾ ॥ ೨ ॥ ಎನ್ನ ಬುದ್ಧಿ ತೆಗೆಯದೀರು ಅನ್ಯರೀಗೆ ಹೇಳದೀರು । ನಿನ್ನವನಾಗಿರುವೆ ಕೇಳೋ ಶ್ರೀಧರಣೀಕಾಂತಾ ॥ ನನ್ನವನಾದರೆ ಒಳ್ಳಿತು ನಿನ್ನಿಂದ ಫಲವೇನೊ ಯೆನಗೇ । ಹೊನ್ನು ಎಷ್ಟು ಕೊಡುವಿ ಪೇಳೊ ಶ್ರೀಲಕ್ಷ್ಮೀಕಾಂತಾ ॥ ॥ ೩ ॥ ಕೊಡುವೆ ನಾ ನಿನಗೇನು ಇನ್ನೂ ಬಡವ ನಾ ಮಡದಿಯ ಕಳದು । ಅಡವಿಪಾಲಾಗಿದ್ದು ಅರಿಯೆಯಾ ಶ್ರೀಧರಣೀಕಾಂತಾ ॥ ಬಡವ ನೀನಾದರೆ ಯೇನು ಬಡವರಲ್ಲ ನಿನ್ನ ಭಕ್ತರು । ಮುಡುಪು ತಂದ ಮೇಲೆ ಕೊಡು ನೀ ಶ್ರೀಲಕ್ಷ್ಮೀಕಾಂತಾ ॥ ೪ ॥ ಅದು ಒಂದು ಬಿಟ್ಟು ಹೇಳೊ ಮುಂದೆ ಪದುಮಾವತಿಯ ಕೂಡಿಕೊಂಡು । ಮದುವೆಸಾಲ ಮುಟ್ಟಿಸುವೆನೊ ಶ್ರೀಧರಣೀಕಾಂತಾ ॥ ಮದುವೆಸಾಲವನ್ನು ಕೊಟ್ಟು ಮುದದಿಂದ ಋಣಮುಕ್ತನಾಗಿ । ಅದರಮೇಲೆ ಕೊಟ್ಟೇಯೇನೋ ಶ್ರೀಲಕ್ಷ್ಮೀಕಾಂತಾ ॥ ೫ ॥ ಋಣಮುಕ್ತ ನಾನಾದಮೇಲೆ ಕ್ಷಣಮಾತ್ರ ಇಲ್ಲಿರುವನಲ್ಲಾ । ಒಣಮಾತೇನೊ ಸ್ಥಳ ಪೇಳೆನಗೆ ಶ್ರೀಧರಣೀಕಾಂತಾ ॥ ಗುಣಗಳು ನಿನ್ನಲ್ಲೆ ಇಲ್ಲ ಹಣವು ಕೊಡಲಾಗದು ಮತ್ತೆ । ಒಣಸ್ನೇಹಕ್ಕೆ ಸ್ಥಳ ಬಂದೀತೆ ಶ್ರೀಲಕ್ಷ್ಮೀಕಾಂತಾ ॥ ೬ ॥ ಮುಂಚಿದ್ದ ಈ ಸ್ಥಳವು ಮತ್ತೆ ಮುಂಚಿನ್ನಾಗಿರುವದು ಇಲ್ಲೇ । ಚಂಚಲನಾಗಲು ಬೇಡ ಶ್ರೀಧರಣೀಕಾಂತಾ ॥ ವಂಚಕ ನೀ ಸರಿಯೊ ಒಂದಕು ಕೊಡದ ಲೋಭಿ ಒಳ್ಳೆ । ಹಂಚಿಕಿಯವನೋ ನೀನು ಶ್ರೀಲಕ್ಷ್ಮೀಕಾಂತಾ ॥ ೭ ॥ ನಿನ್ನೊಳು ವಂಚನೆಯಿಲ್ಲ ನಿನ್ನ ಹಿರಿಯತನ ಕಡೆಗೆ । ಚೆನ್ನಾಗಿ ನಾ ನಡಿಸುವೆನು

ಶ್ರೀಧರಣೀಕಾಂತಾ ॥ ಹಿರಿಯತನವೇನು ಚನ್ನಾಗಿ ನಡಿಸುವದೇನು । ಎನ್ನ ಮುಂದೆ ಪೇಳೊ ನೀನು ಶ್ರೀಲಕ್ಷ್ಮೀಕಾಂತಾ ॥ ೮ ॥ ನಿನ್ನ ದರ್ಶನವು ಮುಂಚೆ ನಿನ್ನಾ ತೀರ್ಥದಲ್ಲೆ ಸ್ನಾನಾ । ನಿನ್ನ ಅಭಿಷೇಕವು ಮುಂಚೆ ಶ್ರೀಧರಣೀಕಾಂತಾ ॥ ನಿನ್ನಾ ಮಾತು ಗೆಲಿಸುವೀಯೊ ಧನ್ಯಾ ನೀನು ಧರೆಯೊಳಗೆ । ನಿನ್ನಂತೆ ಆಗಲಿ ಹೋಗೋ ಶ್ರೀಲಕ್ಷ್ಮೀಕಾಂತಾ ॥ ೯ ॥ ನೂರು ಪಾದಾ ಅಳದು ಕೊಡು ನೀ ಬ್ಯಾರೆ ಸ್ವಾಮಿಪುಷ್ಕರಣೀಯಾ । ತೀರದಲ್ಲೆ ಇರುವೆ ನಾನು ಶ್ರೀಧರಣೀಕಾಂತಾ ॥ ಮೂರು ಪಾದದಿಂದ ಹಿಂದೆಕೆ ಮೂರುಲೋಕಾವನ್ನು ಗೆದ್ದೀ । ನೂರು ಪಾದಾಕಂತು ಎಷ್ಟ್ಯೋ ಶ್ರೀಲಕ್ಷ್ಮೀಕಾಂತ್ಯಾ ॥ ೧೦ ॥ ಮತ್ಯಾಕೀಪರಿ ಮಾತಾಡುವೀ ಹೊತ್ತು ಬಹಳಾಯಿತು ಯೆನಗೆ । ಪಥ್ಯಕೆ ತಡವಾಯಿತೇಳೊ ಶ್ರೀಧರಣೀಕಾಂತಾ ॥ ಸತ್ಯಾ ನೂರುಪಾದ ಸ್ಥಳವು ಕ್ಲೃಪ್ತಮಾಡಿ ಕೊಟ್ಟೆ ನಿನಗೆ । ಸ್ವಸ್ಥದಿಂದ ಇರು ಹೋಗೊ ನೀ ಶ್ರೀಲಕ್ಷ್ಮೀಕಾಂತಾ ॥ ೧೧ ॥ ಸ್ವಸ್ಥದಿಂದ ಇರುವೆನ್ಯ್ಯಾಂಗೆ ಪಥ್ಯಾದಡಿಗೆ ಮಾಡುವಂಥಾ । ಹೆತ್ತಾಯಿ ಇಲ್ಲವೊ ಯೆನಗೆ ಶ್ರೀಧರಣೀಕಾಂತಾ ॥ ಹೆತ್ತಾಯಿಾಪರಿಯಾಗಿ ನಿನಗೆ ಪಥ್ಯಾದಡಿಗೆ ಮಾಡುವದಕ್ಕೆ । ಮತ್ತೆ ಬಕುಲಾವತಿಯು ಕೊಡುವೆ ಶ್ರೀಲಕ್ಷ್ಮೀಕಾಂತಾ ॥ ೧೨ ॥ ಇಂಥಾ ಘಾಯ ಮಾಯುವತನಕಾ ಜೇನ್ತುಪ್ಪಾ ಸಾಮೆಯ ಅನ್ನ । ಸಂತತ ಬೇಕಲ್ಲಾ ಯೆನಗೆ ಶ್ರೀಧರಣೀಕಾಂತಾ ॥ ಚಿಂತಾಮಣಿಗೆ ಸರಿಯಾದಂಥಾನಂತಾದ್ರಿಯಲ್ಲಿದ್ದ ಮೇಲೆ । ಚಿಂತೆ ಯಾಕೆ ಅದನು ಕೊಡುವೆ ಶ್ರೀಲಕ್ಷ್ಮೀಕಾಂತಾ ॥ ೧೩ ॥

### ವಚನ.

ಧರಣಿಯಾ ರಮಣ ಈ ಪರಿಯು ಬೇಡಿದ್ದು ಕೊಟ್ಟು ತಿರುಗಿದನು ಸ್ವಸ್ಥಳಕೆ ಸಿರಿದೇವಿ ಅರಸ ತಾಂ ತೆರಳಿದನು ಸ್ವಾಮಿಪುಷ್ಕರಣಿಯ ತೀರಕ್ಕೆ ಸರಸದಲಿ ಮುಂದಲ್ಲೆ ಇರುವ ನಿತ್ಯದಲೀ ॥ ಪರಮ ಭಕುತಳು ಆಗಿ ಇರುವ ಬಕುಲಾವತಿಯು ಕರದಿಂದ ಪಥ್ಯ ಸ್ವೀಕರಿಸುತಲೆ ನಿತ್ಯದಲಿ



ಸುರನತಾನಂತಾಖ್ಯ ಗಿರಿಯಲ್ಲಿ ಇರುವವನ ಕರುಣದಲಿ ಮುಗಿಯಿತಿಲ್ಲೆರಡು ಅಧ್ಯಾಯಾ ॥ ೧ ॥

## ಎರಡನೆಯ ಅಧ್ಯಾಯವು ಸಂಪೂರ್ಣವು.

॥ ಶ್ರೀಪದ್ಮಾವತೀಪ್ರಿಯಾಯ ನಮಃ ॥

# ಮೂರನೆಯ ಅಧ್ಯಾಯವು.

ಜನ್ಮನಾಶಾಶಪರದಾ ವಸುದಾನಾಗ್ರಜಾ ನಿಜಾನ್ ।
ಪದ್ಮಾವತೀ ಪದ್ಮಭವಾ ವನಕ್ರೀಡಾರತಾವತಾತ್ ॥

### ವಚನ.

ಚಂದದಲಿ ವೆಂಕಟೆಗೆ ಮುಂದೆ ಪದ್ಮಾವತಿಯ ಸಂದರ್ಶನಾದದ್ದು ಸಂಧಾನ ತರಬೇಕು ಯೆಂದು ಪದ್ಮಾವತಿಯ ತಂದೆಯ ಕಥೆ ಸ್ಮೃತಿಗೆ ತಂದು ಅದು ವಿಸ್ತಾರದಿಂದ ಪೇಳುವೆನೂ ॥ ಚಂದ್ರವಂಶದಲ್ಯೊಬ್ಬ ಚಂದಾದ ನೃಪ ಸುಧರ್ಮನೆಂದು ಇರುವನು ಅವಗೆ ಮುಂದೆ ಇಬ್ಬರು ಸುತರು ಚಂದದಲಿ ಆಕಾಶನೆಂದು ಹಿರಿಯಗೆ ನಾಮ ಮುಂದೆ ಕಿರಿಯನು ತೊಂಡಮಾನ ಯೆನಿಸುವನೂ ॥ ೧ ॥ ಆ ಕಾಲಕೊಂದುದಿನ ಆಕಾಶನೃಪ ಚಿತ್ತವ್ಯಾಕುಲದಿ ಹೀಗೆ ಚಿಂತಾಕುಲಾಗಿರುತಿದ್ದು ತೋಕಗಳು ಇಲ್ಲೆಂದು ಶೋಕದಲಿ ಕಣ್ಣೀರು ಹಾಕಿ ಸ್ಮರಿಸಿದ ದೇವಲೋಕಗುರುವ ॥ ಆ ಕ್ಷಣಕೆ ಗುರು ದೇವಲೋಕದಿಂದಲಿ ಬಂದು ಯಾಕೆ ಸ್ಮರಿಸಿದಿ ಯೆನ್ನನೀ ಕಾಲದಲಿ ಯೇನು ಬೇಕು ಬೇಡಲೊ ನೀನು ನಾ ಕೊಡುವೆನೆಂದೆನಲು ಆಕಾಶನೃಪ ತನ್ನ ಶೋಕವನು ನುಡಿದಾ ॥ ೨ ॥ ಏನು ಪೇಳಲಿ ಗುರುವೆ ನಾನು ಬಲು ಪಾಪಿಷ್ಠ ಯೇನು ಇದ್ದೇನು ಸಂತಾನ ಮುಂದೆನಗಿಲ್ಲ ಯೇನು ಪೂರ್ವದಲ್ಯಾಗ ನಾನು ಮಾಡಿದ ಪಾಪ

ಯೇನು ತಿಳಿಯದು ಯೆನಗೆ ನೀನು ಪೇಳೋ ॥ ಹೀನಬುದ್ಧಿಂದ ಪರ
ಮಾನವರ ಮಕ್ಕಳ ನಾನು ಕೊಲಿಸಿದೆನೇನು ದಾನಪಾತ್ರರಿಗೆ ಫಲ
ದಾನಮಾಡಿಲ್ಲೇನು ಏನು ಕಾರಣವು ಸಂತಾನ ಕಣ್ಣಿಲಿ ಕಾಣೆ ನಾನು
ಅಯ್ಯಯ್ಯೋ ॥ ೩ ॥ ಮಕ್ಕಳಿದ್ದರೆ ರಾಜ್ಯ ಮಕ್ಕಳಿದ್ದರೆ ಮನೆಯು ಮಕ್ಕ
ಳಾಡಿದರೆ ಬಹಳಕ್ಕರತೆ ಜೀವಕ್ಕೆ ಮಕ್ಕಳಿಲ್ಲದೆ ಮತ್ತೆ ಮಿಕ್ಕರಸಪದ
ವ್ಯಾಕೆ ಮಕ್ಕಳಿದ್ದರೆ ಯೆಲ್ಲ ಸೌಖ್ಯವೆನಿಸುವದೂ ॥ ಮಕ್ಕಳಿಂದಲೆ ಹಬ್ಬ
ಹುಣ್ಣಿಮೆಯು ಉಲ್ಲಾಸ ಮಕ್ಕಳಿಂದಲೆ ಮುಂಜಿಮದುವೆಯಕಾರ್ಯಾ
ಮಕ್ಕಳಿಗೆ ಸರಿಯು ಮಾಣಿಕ್ಯ ಧರೆಯೊಳಗಿಲ್ಲ ಮಕ್ಕಳಿಂದಲೆ ಇಹವು
ಮಕ್ಕಳಿಂದಲೆ ಪರವು ಮಕ್ಕಳಿಲ್ಲೆನ್ನ ಭಾಗ್ಯಕ್ಕೆ ಅಯ್ಯಯ್ಯೋ ॥ ೪ ॥
ಮಕ್ಕಳಾ ಮೋರೆ ಯವೆ ಇಕ್ಕದಲೆ ನೋಡಿಲ್ಲ ಮಕ್ಕಳಾಡಿದ ಮಾತು
ನಕ್ಕು ಕೇಳಿಲ್ಲ ನಾ ಮಕ್ಕಳಿಂದಲೆ ಕೂಡಿ ಅಕ್ಕರದಿ ಉಣಲಿಲ್ಲ ಮಕ್ಕಳನ
ಯೆತ್ತಿ ಮುದ್ದಿಕ್ಕಿದವನಲ್ಲಾ ॥ ಮಕ್ಕಳಿಲ್ಲದ ಮನುಜ ಲೆಕ್ಕದಾವದರೊ
ಳಗೆ ಬೆಕ್ಕು ಮೊದಲಾದಂಥ ಮಿಕ್ಕ ಪ್ರಾಣಿಗಳೆಲ್ಲ ಮಕ್ಕಳಾಡಿದ ಬಹಳ
ಚಕ್ಕಂದವನು ನೋಡಿ ಸೌಖ್ಯಬಡುತಿಹವಯ್ಯ ಧಿಕ್ಕರಿಸು ಯೆನ್ನ ಜನ್ಮ
ಅದಕ್ಕಿಂತ ವ್ಯರ್ಥಾ ॥ ೫ ॥ ಮುನ್ನ ನಮ್ಮೊಳಗಾರು ಉಣ್ಣದಲೆ ಈ
ಬದುಕು ಮಣ್ಣುಪಾಲಾಗುವದು ಘನ್ನ ಈ ಚಿಂತೆಯಲಿ ಬಣ್ಣಗೆ
ಟ್ಟೆನು ನಾನು ಕಣ್ಣಿಗಿಲ್ಲವು ನಿದ್ರೆ ಸುಣ್ಣದಂತಲೆ ಕುಡಿದು ಸಣ್ಣಾದೆ
ನಯ್ಯಾ ॥ ಇನ್ನೇನು ಗತಿ ಯೆನಗೆ ಚನ್ನಾಗಿ ಉಭಯಕುಲವನ್ನು ತಾರಿ
ಸುವಂಥ ಹೆಣ್ಣು ಮೊದಲಾಗಿಲ್ಲ ಪುಣ್ಯಹೀನನು ನಾನು ಅಣ್ಣತಮ್ಮರ
ಒಳಗೆ ಪುಣ್ಯ ಇಲ್ಲೊಬ್ಬನಲಿ ಪುಣ್ಯಗುರುವೇ ॥ ೬ ॥

## ರಾಗ ಶಂಕರಾಭರಣ, ಆದಿತಾಳ.

ಇಂಥಾ ಮಾತಿಗೆ ಜೀವ ಹೀಗೆಂತ ನುಡಿದನು ॥ ಚಿಂತೆ ಮಾಡ
ಬ್ಯಾಡ ಭೂಕಾಂತ ಯೆಂದನು ॥ ೧ ॥ ಪುತ್ರಕಾಮೇಷ್ಟಿ ಮಾಡು ಭಕ್ತಿ
ಯಿಂದಲೀ ॥ ಪುತ್ರನಾಗುವನು ನಿಮಗೆ ಸತ್ಯ ನೀ ತಿಳೀ ॥ ೨ ॥ ಗುರು
ವಿನ ಮಾತು ಕೇಳಿ ಪರಮ ಹರುಷದಿಂದಲೆ ॥ ಅರಸ ಬ್ರಾಹ್ಮಣರನೆಲ್ಲ



ಕರಸಿದಾಗಲೇ ॥ ೩ ॥ ಮುಂದೆ ಯಜ್ಞ ಮಾಡಬೇಕು ಯೆಂದು ತ್ವರ
ದಲೀ ॥ ಬಂದು ಭೂಮಿ ಶೋಧಿಸಿದನು ಚಂದದಿಂದಲೀ ॥ ೪ ॥ ಚೆಲುವ
ನೇಗಲ ಜೆಗ್ಗಿ ಯೆಳವ ಕಾಲಕೆ ॥ ಹೊಳವ ಪದ್ಮ ಬಂತು ಅಲ್ಲೆ ಸುಳಿದು
ಮೇಲಕೆ ॥ ೫ ॥ ಇರುವಳೊಬ್ಬಳಲ್ಲೆ ಮತ್ತೆ ಪರಮಸುಂದರೀ ॥ ಅರಸ
ನೋಡಿ ಬೆರತು ನಿಂತ ಸ್ಮರಿಸಿ ಪರಿಪರೀ ॥ ೬ ॥ ಕಾಣಿಸದಲೆ ಗಗನದಲ್ಲಿ
ವಾಣಿ ಆಯಿತೂ ॥ ಕಾಣದಿದ್ದರು ಆಗ ಸಕಲ ಪ್ರಾಣಿ ಕೇಳಿತೂ ॥ ೭ ॥
ಇನ್ನು ಚಿಂತೆಮಾಡಬೇಡ ಧನ್ಯ ಅರಸ ನೀ ॥ ನಿನ್ನ ಮಗಳು ಯೆಂದು
ತಿಳಿಯೊ ಚೆನ್ನಾಗಿ ನೀನು ॥ ೮ ॥ ಇಂದಿನಾರಭ್ಯ ಕ್ಲೇಶ ಹಿಂದೆ ಬಿಡು
ವಿಯೊ ॥ ಮುಂದೆ ಮುಂದಕಿನ್ನು ಆನಂದಬಡುವಿಯೊ ॥ ೯ ॥ ಗಗನ
ವಾಣಿಯನು ಕೇಳಿ ಅರಸ ಲಗಬಗೀಯಲೀ ॥ ಮಗಳನೆತ್ತಿಕೊಂಡನಾಗ
ಮುಗುಳುನಗೆಯಲೀ ॥ ೧೦ ॥ ತಂದೆ ಮಗಳಜನ್ಮ ಪದ್ಮದಿಂದ ತಿಳಿ
ದನೂ ॥ ಮುಂದೆ ಪದ್ಮಾವತೀ ಯೆಂದು ಕರದನೂ ॥ ೧೧ ॥ ಮಗಳ
ಕಾಲಗುಣದಿ ಮುಂದೆ ಮಗನು ಆದನೂ ॥ ಮಗನ ಕರದ ವಸುದಾ
ನೆಂದು ಗಗನರಾಜನೂ ॥ ೧೨ ॥ ತಕ್ಕವಾಗಿ ಅರಸಗ್ಹೀಗೆ ಮಕ್ಕಳಾದರೂ ॥
ಸೌಖ್ಯದಿಂದ ಮುಂದೆ ದಿನದಿನಕ್ಕೆ ಬೆಳದರೂ ॥ ೧೩ ॥ ಬಂತು ಯೌವ
ನವು ಭೂಕಾಂತಪುತ್ರಿಗೆ ॥ ಬಂತು ಆಗ ಮತ್ತೆ ಬಹಳ ಚಿಂತೆ ಅರಸಗೆ ॥
॥ ೧೪ ॥ ಇಂಥ ಮಗಳಿಗಿನ್ನು ತಕ್ಕಂಥ ಪುರುಷನೂ ॥ ಪ್ರಾಂತದೊಳಗೆ
ಯಿಲ್ಲ ದಿವ್ಯ ಕಾಂತಿಮಂತನೂ ॥ ೧೫ ॥ ಎಂತು ನೋಡಲಿನ್ನು ಹುಡುಕಿ
ಶ್ರಾಂತನಾದೆನೂ ॥ ಚಿಂತೆಯೊಳಗೆ ಬಿದ್ದು ಮುಂದೆ ಪ್ರಾಂತಗಾಣೆನೂ ॥
॥ ೧೬ ॥ ಅಂತರಂಗದೊಳಗೆ ಹೀಗೆಂತ ಅನುದಿನಾ ॥ ಚಿಂತಿಸಿದನು
ಮರೆತು ಅನಂತಾದ್ರೀಶನಾ ॥ ೧೭ ॥

## ವಚನ.

ಒಂದಾನು ಒಂದು ದಿನ ಮುಂದೆ ಪದ್ಮಾವತಿಯು ಚಂದಾದ
ಕುಸುಮಗಳ ಇಂದು ಮುಡಿಯಲು ಬೇಕು ಯೆಂದು ಸಖಿಯರ ಕೂಡಿ
ಮುಂದೆ ವನಕ್ಹೋಗಬೇಕೆಂದು ಶೃಂಗರಿಸಿದಳು ಚಂದದಿಂದಾ ॥

ಇಂದುಮುಖಿ ತನ್ನಳತೆಯಿಂದಿರುವ ಕನ್ನಡಿಯ ಮುಂದಿರಿಸಿ ನೋಡು ತಲೆ ಮುಂದೆ ರತ್ನದ ಹಣಿಗೆಯಿಂಧಿಕ್ಕಿ ಬೈತಲೆಯ ಚಂದಾಗಿ ತೆಗೆದು ತ್ವರದಿಂದ ಆಭರಣಗಳ ಮುಂದೆ ತರಿಸಿದಳೂ ॥ ೧ ॥ ಕೆತ್ತಿಸಿದ ರಾಗಟಿಯು ಒತ್ತಿ ಮೊದಲ್ಹಾಕಿ ಹತ್ತ್ರೊತ್ತಿದಳು ಅದರ್ಹಿಂದೆ ನುತ್ತಾದ ಚೌರಿಯನು ಮತ್ತೆ ಸಾಲ್ಹಿಡಿದು ಇತ್ತುತ್ತ ಕೇತಕಿಗಳನು ಒತ್ತಿ ಹೆಣದಳು ಗೊಂಡೆ ಮತ್ತೆ ತುದಿಗೇ ॥ ಅತ್ತಿತ್ತ ನೋಡದಲೆ ಅರ್ತಿಂದ ಮುಖ ತೊಳೆದು ಮತ್ತೆ ಮೇಲರಸಿನವ ಅತ್ಯಂತ ತಿಲಕ್ಹಚ್ಚಿ ಚಿತ್ರ ಕುಂಕುಮ ಫಣೆಗೆ ಚಿತ್ತಗೊಟ್ಟು ಹಚ್ಚಿದಳು ಚಿತ್ತಾರ ಬರದಂತೆ ಮತ್ತಗಜಗಮನೇ॥ ॥ ೨ ॥ ಥಳಥಳನೆ ಜಾತಿಯಿಂಥೊಳೆವ ಮುತ್ತಿನ ಭವ್ಯ ಯೆಳೆಯು ಇಮ್ಮಡಿ ಮಾಡಿ ನಳಿನಾಕ್ಷಿ ಬೈತಲೆಗೆ ಅಳತೆಯಿಂದ್ಹಾಕಿದಳು ತಳಪಿನಲಿ ಯೆಡಬಲಕೆ ಯೆಳದು ಕಟ್ಟಿದಳ್ಹಿಂದೆ ಹೆರಳಿಗ್ಹಾಕೀ ॥ ತೊಳವ ಮುತ್ತಿನ ಬುಗುಡಿ ಪೊಳೆವ ಮಿಣಾನ್ಪಾವಲಿಯು ಝಳಝುಳಿತವಾಗಿರುವ ಗಿಳಿ ಘಂಟಿ ಚಳತುಂಬುಗಳನಿಟ್ಟು ಕರ್ಣದಲಿ ಉಳಿದ ದ್ರಾಕ್ಷಾಲತೆಯು ಎಳೆದು ಬಿಗಿದಳು ಮೇಲೆ ಸುಳಿಗುರುಳಿನಲ್ಲೀ ॥ ೩ ॥ ಇದ್ದ ಮುತ್ತುಗಳೆಲ್ಲ ಗೆದ್ದು ಬಹು ಮೇಲಾಗಿ ಇದ್ದ ಮುತ್ತುಗಳ್ಹಚ್ಚಿ ತಿದ್ದಿ ಮಾಡಿದ ನತ್ತು ಉದ್ರೇಕದಿಂದಿಡಲು ಮುದ್ದು ಸುರಿವುತ ಮುಂಚೆ ಇದ್ದ ಮುಖ ಮತ್ತಿಷ್ಟು ಎದ್ದು ಕಾಣಿಸಿತೂ ॥ ಪ್ರದ್ಯುಮ್ನಚಾಪದಂತಿದ್ದೆರಡು ಹುಬ್ಬುಗಳ ಮಧ್ಯ ನೆಸಲಿನ ಮೇಲೆ ಶುದ್ಧ ಕಸ್ತೂರಿಯನು ತಿದ್ದಿ ತಿಲಕವನಿಟ್ಟು ತಿದ್ದಿದಳು ಕಾಡಿಗಿಯು ಪದ್ಮಲೋಚನಗಳಿಗೆ ಪದ್ಮಜಾತೇ ॥ ೪ ॥ ಚಂದ್ರಗಾವಿಯನುಟ್ಟು ಚಂದಾದ ಕುಪ್ಪುಸವು ಮುಂದೆ ಬಿಗಿ ಬಿಗಿ ತೊಟ್ಟು ಮುಂದೆಲೆಗೆ ಶೋಭಿಸುವ ಚಂದ್ರಸೂರ್ಯರನಿಟ್ಟು ಚಂದಾಗಿ ಬೈತಲಿಗೆ ಚಂದಿರವ ಸುರಿಸಿದಳು ಚಂದ್ರಮುಖಿಯೂ ॥ ಕಂದರ್ಪಬಾಣಗಳ ವೃಂದವನು ಒಮ್ಮೆಲೆ ಸಂಧಿಸಿದ ಪರಿ ಗೀರುಗಂಧವನು ಕೈಗ್ಹಚ್ಚಿ ಮುಂದೆ ಕೊರಳಿಗೆ ಒರಸಿ ಚಂದ್ರಸರ ಮೊದಲಾದ ಒಂದೊಂದು ಹಾರಗಳು ಮುಂದೆ ಹಾಕಿದಳೂ ॥ ೫ ॥ ಕಟ್ಟಿ ಕೊರಳಿಗೆ ಚಿಂಚಪಟ್ಟಿ ಸರ ಮುತ್ತು ಮೇಲಿಟ್ಟು ಚಿಂತಾಕವನು ಕಟ್ಟಿ ಗೆಜ್ಜೆಯಾಟೀಕಿ ಕಟ್ಟಾಣಿಯನು ಮತ್ತೆ



ಕಟ್ಟಿ ತಾಯಿತ ಮುತ್ತು ಇಟ್ಟು ಮೋಹನಮಾಲೆ ಶ್ರೇಷ್ಠಪದಕಾ ॥ ಬಟ್ಟ ಕುಚಗಳ ಮೇಲೆ ದಟ್ಟ ಗೋಧಿಯ ಸರವು ದಿಟ್ಟ ಏಕಾವಳಿಯು ಇಟ್ಟ ಪುತ್ಥಳಿಸರವು ಅಷ್ಟು ಸರಗಳನೆಲ್ಲ ಮೆಟ್ಟಿ ಮೇಲ್ನೆರವಂಥಾ ಶ್ರೇಷ್ಠಸರಿಗಿಯು ತರಿಸಿ ಇಟ್ಟಳಾಕೆ ॥ ೬ ॥ ವಂಕಿ ತೋಳಿಗೆ ಹರಡಿಕಂಕಣವು ಕೈಗಿಟ್ಟು ಟೊಂಕದಲಿ ವಡ್ಯಾಣ ಬಿಂಕದಲಿ ಬಿಗಿದಿಟ್ಟು ಪಂಕಜಾಕ್ಷಿಯು ಮುಂದಲಂಕರಿಸಿದಳು ಪಾದಪಂಕಜಂಗಳಿಗೆ ಅಹಂಕಾರದಿಂದಾ ॥ ಪೊಂಕದಿಂದಿಟ್ಟು ಅಕಳಂಕ ರುಳಿ ಕಾಲ್ಗಡಗ ಪಂಕಜಾವತಿ ತಾನು ಕೊಂಕವನು ಮಾಡುತಲಿ ಬಿಂಕದಲೆ ನಡಿವಾಗ ಝೋಂಕರಿಸುವಂಥ ಬಹು ಕಿಂಕಿಣಿ ಪೈಜಾಣಿ ಇಟ್ಟಳಾಕೆ ॥ ೭ ॥ ಕಾಲಬೆರಳಿಗೆ ಮುಂದೆ ಕಾಲುಂಗುರಗಳು ಪಿಲ್ಲಿ ಮೇಲಾದ ಮೆಂಟಿಕೆಯು ಮೇಲೆ ಮತ್ತಣಿಮೆಂಟು ಬಾಲೆ ಯಿಟ್ಟಳು ಮತ್ತೆ ಸಾಲದಲೆ ಅರಗಿಳಿಯು ಶಾಲು ಮುಸುಕಿಕ್ಕಿ ಬಹು ಲೇಸಾದಳಾಕೆ ॥ ಕಾಲಕಾಲಕೆ ಮಡಿಚಿ ಬಾಲೆಯರು ಕೊಟ್ಟ ತಾಂಬೂಲವನು ಮೆಲ್ಲುತಲೆ ಸಾಲ ಗೆಳತೇರ ಕೂಡಿ ಬಹಳ ಹರುಷದಿ ಗೆಜ್ಜೆಕಾಲ ಕುಣಿಸುತ ತನ್ನ ಆಲಯದಿ ಹೊರಟಳಾ ಕಾಲದಲೀ ॥ ೮ ॥

### ವಚನ.

ಈ ಪರಿ ಪದ್ಮಾವತಿಯು ಬರುತಿರಲಾಗ ಗಜಗಮನದಿಂದಾ ವನದೇವತೆಯು ಮದನಸತಿಯಂತಿಪ್ಪ ತರುಣಿರೂಪವ ತಾಳಿ ವನ ಮಧ್ಯದಲೆ ತಾಂ ಬೆಸಗೊಂಡಳು ॥ ಯಾರೆಲೆ ಬಾಲೆ ನೀ ಬಾಲಚಂದ್ರ ಲಲಾಟಿ ಕಾಳಾಹಿವೇಣಿ ನಿಜಾಲಿಯರ ಕೂಡಿ ಯೆಲ್ಲಿಗೆ ಪೋಗುವೆ ತಂದೆತಾಯ್ಗಳು ಬಂಧುಬಳಗವು ಕಾಂತನ್ಯಾರು ಪೇಳೆಂದೂ ॥ ೧ ॥

### ರಾಗ ಯರಕಲಕಾಂಬೋಧಿ, ಅಟತಾಳ.

ಕುಸುಮಗಂಧಿಯೆ ಯೆನ್ನ ಹೆಸರು ಪದ್ಮಾವತಿ ಕೇಳೆ ॥ ಕುಸುಮಕ್ಕೆ ನಾ ಬಂದೆ ತಿಳಿಯೆ ಮಾತಿನರಗಿಳಿಯೇ ॥ ೧ ॥ ವಸುಧೆಯು ನಮ್ಮ ತಾಯಿ ವಸುದಾನ ನಮ್ಮ ತಮ್ಮ ॥ ಅಸಮ ತೊಂಡಮಾನ

ನೆಂಬುವನು ನಮ್ಮ ಕಕ್ಕನೂ ॥ ೨ ॥ ಆಕಾಶರಾಜನು ನಮ್ಮ ಸಾಕಿದಂಥ ತಂದೆಯು ॥ ನಾಖೂನವನು ಪೇಳಿದೆ ಸಾರಿ ಹೇಳಿದೇ ॥ ೩ ॥ ನಾರಾಯಣ ಪುರವು ನಮ್ಮ ತೌರಮನೆಯು ಅದು ॥ ಬೇರೆ ಅತ್ತೆಮನೆ ಯಾವದು ಮುಂದೆ ತಿಳಿಯದು ॥ ೪ ॥ ಅಂತರಂಗದೊಳಗೆ ಶಾಂತಾನಂತಾದ್ರೀಶನೆ॥ ಕಾಂತನಾಗಬೇಕೆಂದು ನಾ ಬೇಡಿಕೊಂಬುವೇ ॥ ೫ ॥

### ವಚನ.

ಈ ಮಾತ ಲಾಲಿಸಿ ನಿಜಾಂತರಂಗದಿ ಇವಳ ತತ್ವವ ತಿಳಿದಪಾರ ಮೋದದಿ ತುಂಬಿ ತುಳುಕಿ ಆ ರಮಾರೂಪಿಣಿಯಂ ಮನದಲಿ ನಮಿಸುತ ಕುಸುಮಫಲಗಳಿಂದುಪಚರಿಸಿದಳು ॥ ಮತ್ತೆ ತಾನ್ ಸಖಿಯರ ಕೂಡೆ ಬೆರಸಿ ಚರಿಸುವಳಂತೆ ನಟಿಸಿ ಯೆಲ್ಲರಿಗು ತಿಳಿಯಧಾಂಗವರು ಕುಸುಮವನದ ಸೊಬಗ ನೋಡುತಿರಲು ಕಣ್ಮರೆಯಾಗಿ ದೇವಿಯು ವಿಲಾಸವಂ ನೋಡುತಿದ್ದಳು ॥ ೧ ॥

### ರಾಗ ಶಂಕರಾಭರಣ, ಆದಿತಾಳ.

ಹಗರಣದಿಂದಲೆ ನಗಪುತ ಕೆಲವುತ । ಬಗೆಬಗೆ ಗೆಳತೇರ ಕೂಡೀ ॥ ಜೊಗರಿಕುಚದ ಶರಗು ತೆಗತೆಗಧಾಕುತ। ಸುಗುಣೆ ಬಂದಳು ವನದಲ್ಲೀ ॥ ೧ ॥ ಮಂದಗಮನೆ ತಾನು ಬಂದು ಕುಳಿತಳಲ್ಲಿ । ಒಂದು ವೃಕ್ಷದ ಮೂಲದಲ್ಲೀ ॥ ಚಂದಚಂದದ ಪುಷ್ಪ ತಂದು ಮಾಲೆಯು ಮಾಡಿ । ಮುಂದೆ ಕೊಟ್ಟಾರು ಸಖಿಯರೂ ॥ ೨ ॥ ಒಂದೊಂದು ಹಾರವು ಚಂದದಿಂದಿಡುತಿರೆ । ಬಂದ ನಾರದನು ಆಗಲ್ಲೀ ॥ ಬಂದ ಮುನಿಯ ಕಂಡು ಅಂದಳು ಈ ಪರಿ। ಬಂದವನ್ಯಾರು ಕೇಳಿರಮ್ಮಾ ॥ ॥ ೩ ॥ ಮುನ್ನ ಆ ಸಖಿಯರು ಮನ್ನಿಸಿ ಕೇಳಿದರೂ । ಘನ್ನ ಪುರುಷ ನೀನ್ಯಾರೋ ॥ ಕಣ್ಣಿಲಿ ನೋಡಲು ಮಾನ್ಯನಾಗಿರುವಿಯೊ । ಚನ್ನಾಗಿ ಪೇಳಯ್ಯ ನೀನು ॥ ೪ ॥ ಕಮಲಾಕ್ಷಿಯರ ಮುಖಕಮಲದಿಂಥೊರಟಂಥಾ। ವಿಮಲಮಾತುಗಳನೆ ಕೇಳೀ ॥ ಸುಮಹಿಮಾನಂತಾದ್ರಿರಮಣನ ಪೌತ್ರನು। ಕಮಲಾವತಿಗೆ ಹೀಗೆಂದಾ ॥ ೫ ॥



### ರಾಗ ಕನಡಕಾಂಬೋಧಿ, ಆದಿತಾಳ.

ನಿಮ್ಮ ಕುಲಗುರು ನಾನು ಕೇಳೆ ಅಮ್ಮಯ್ಯಾ । ನೀನು । ನಮ್ಮಾನು ಮರೆಯಲು ಬೇಡಾ ಅಕ್ಕಯ್ಯಾ ॥ ೧ ॥ ನಮ್ಮ ಕುಲಗುರು ಆದರೊಳಿತು ಅಪ್ಪಯ್ಯಾ । ಇಲ್ಲಿ । ನಿಮ್ಮ ಆಗಮನಾವು ಯಾಕೆ ಅಣ್ಣಯ್ಯಾ ॥ ೨ ॥ ಕೈಯಾ ತೋರೆ ಕೈಯಾ ತೋರೆ ಅಮ್ಮಯ್ಯಾ । ನಿನ್ನಾ । ನೈಯ್ಯಾ ಲಕ್ಷಣವು ಪೇಳೇನಕ್ಕಯ್ಯಾ ॥ ೩ ॥ ಬಾಯಾ ಮಾತಿನಿಂದ ಪೇಳೊ ಅಪ್ಪಯ್ಯಾ । ಯೆನ್ನಾ। ಕೈಯ್ಯಾ ತೋರುವದು ಯಾಕೆ ಅಣ್ಣಯ್ಯಾ ॥ ೪ ॥ ಸಂದೇಹ ಮಾಡಲಿಬೇಡವಮ್ಮಯ್ಯಾ । ನಿನ್ನಾ । ತಂದೆ ಸರಿಯೆ ನಾನು ಕೇಳೆ ಅಕ್ಕಯ್ಯಾ ॥ ೫ ॥ ಸತ್ಯ ಪೇಳೊ ಕೈಯ್ಯ ನೋಡೀ ಅಪ್ಪಯ್ಯಾ । ಯೆನ್ನಾ । ಉತ್ತುಮ ಲಕ್ಷಣಗಳ ಅಣ್ಣಯ್ಯಾ ॥ ೬ ॥ ವರದಾನಂತಾದ್ರೀಶನಾಣೆ ಅಮ್ಮಯ್ಯಾ । ನಾನು । ಸರಸದಿಂದ ಪೇಳುವೆ ಕೇಳಕ್ಕಯ್ಯಾ ॥ ೭ ॥

### ವಚನ.

ತಂಗಿ ನೋಡಮ್ಮ ನಿನ್ನಂಗೈಯಲಿ ಪದ್ಮ ಮಂಗಳ ಸ್ವಸ್ತಿಕವು ಅಂಗಾಲಿನಲಿ ಉಂಟು ಅಂಗನೆಯೆ ನಿನ್ನ ಮುಖ ಹಿಂಗದಲೆ ನಿತ್ಯ ಬೆಳದಿಂಗಳವು ಮಾಡುವದು ಭಂಗಯಿಲ್ಲದಲೇ ॥ ಮಂಗಳಾಂಗಿಯೆ ನಿನ್ನ ಕಂಗಳವು ಯೆರಡು ಪದ್ಮಂಗಳನೆ ಗೆದ್ದಿಹವು ರಂಗುಮಾಣಿಕದಂತೆ ರಂಗುದುಟಿ ನಿನ್ನುಬ್ಬು ಸಿಂಗಾಡಿವಿಲ್ಲ ತಿಳಿಹ್ಯಾಗೆ ಸಂಪಿಗೆಮೊಗ್ಗೆ ಹಾಗೆ ನಿನ್ನ ಮೂಗೂ ॥ ೧ ॥ ಗಲ್ಲ ಕನ್ನಡಿಯಂತೆ ಹಲ್ಲು ದಾಳಿಂಬದ ಬೀಜವಂತೆ ಮೃದು ಬಾಲೆ ನಿನ್ನ ನಾಲಿಗೆಯು ಫುಲ್ಲಾಕ್ಷಿ ನಿನ್ನ ಕೊರಳು ಯೆಲ್ಲಗಿಂತಲಿ ಸೂಕ್ಷ್ಮ ಅಲ್ಲೆ ತಾಂಬೂಲರಸವೆಲ್ಲ ತೋರುವದೂ ॥ ಬಲ್ಲಿದಹಿಯಂತೆ ಧಮ್ಮಿಲ್ಲ ಯಿರುವದು ನಿಂದು ಬಿಲ್ವಫಲದಂತೆ ಉರದಲ್ಲಿ ಶೋಭಿಸುವಂಥ ಚೆಲ್ವ ಕುಚಗಳು ಹೊಟ್ಟೆ ತೆಳ್ಳನೆ ಬಾಳೆಯೆಲೆ ಅಲ್ಲಿ ಬಳಸುಳಿನಾಭಿ ರೋಮಪಂಕ್ತೀ ॥ ೨ ॥ ಚಾರು ಮಧ್ಯಸ್ಥಳವು ಊರು ಬಾಳೆಯ ಕಂಭ ಸಾರವತ್ಸಲದೇಶ ನಾರಿ ನಿನಗಾಗುವನು ಶ್ರೀರಮೇಶನೇ

ಪತಿಯು ಸಾರಿಹೇಳುವೆನೆಂದು ನಾರದನು ಕಂಗಳಿಗೆ ತೋರದ್ಹೋದಾ ॥ ಉರ್ವಿಯಲಿ ಬಹು ರಮ್ಯ ತೋರುವಾನಂತಾಖ್ಯ ಸಾರಗಿರಿ ವೈಕುಂಠ ಸಾರವಿದು ಯೆಂದು ಬಹು ಸಾರುತಲೆ ವರಗಳನು ಬೀರುತಲೆ ಇರುವವನ ಪೂರ್ಣ ದಯದಿಂದ ಸಂಪೂರ್ಣವಾಯಿತು ಇಲ್ಲೆ ಮೂರು ಅಧ್ಯಾಯಾ ॥ ೩ ॥

**ಮೂರನೆಯ ಅಧ್ಯಾಯವು ಸಂಪೂರ್ಣವು.**

---

॥ ರಮಾರಮಣಾಯ ನಮಃ ॥

# ನಾಲ್ಕನೆಯ ಅಧ್ಯಾಯವು.

---

ಮೃಗಯಾಯೈ ಹಯಾರೂಢಂ ಗಹನೇ ಹಸ್ತಿನಾಹೃತಮ್ ।
ಪದ್ಮಾವತೀಕಟಾಕ್ಷೇಷುತಾಡಿತಂ ನೌಮಿ ಶ್ರೀಡಿತಮ್ ॥

## ವಚನ.

ಎಂದು ಪದ್ಮಾವತಿಯುು ಬಂದಳಾ ವನದಲ್ಲಿ ಅಂದಿಗಾ ವೆಂಕಟನು ಮುಂದೆ ಮೃಗಬೇಟೆಯುಲಿ ಇಂದು ಪೋಗಲಿಬೇಕೆಂದು ಸ್ಮರಿಸಿದ ಕುದುರೆ ಬಂದು ನಿಂತಿತವನ ಮುಂದೆ ಆಕ್ಷಣದೀ ॥ ಚಂದಾದ ವೈಬಣ್ಣದಿಂದ ಇರುವದು ಸ್ವರ್ಣಬಿಂದುಗಳು ಅಲ್ಲಲ್ಲೆ ಮುಂದೆ ಕಾಲ್ಗಗ್ಗರಿಯು ಮುಂದಲೆಯ ಮೇಲ್ಗರಿಯು ಒಂದೊಂದು ಹರಳ್ಹಚ್ಚಿ ಕುಂದಣವ ಕೂಡಿಸಿದ ಚಂದದರಳೆಲೆ ದೂರಿಂದ ಹೊಳೆಯುವದೂ ॥ ೧ ॥ ಮುತ್ತಿನಾ ಹಾರಗಳು ಪುತ್ಥಳಿಯ ಸರ ಮೇಲೆ ಮತ್ತೆ ಸರಗಳನೆಲ್ಲ ಒತ್ತಾಗಿ ಧರಿಸಿಹದು ಉತ್ತಮಾಶ್ವಕ್ಕೆ ಇನ್ನು ಮತ್ತೆ ಪರಿಮಿತಿಯಿಲ್ಲ ಮುತ್ತುಗಳೆ ತೋರುವವು ಯೆತ್ತ ನೋಡಿದರೂ ॥ ಉತ್ತುಮಾಶ್ವವ



ನೋಡಿ ಉತ್ತುಮೋತ್ತಮ ಹರಿಯು ನಿತ್ಯಭೂಷಿತ ತಾನು ಮತ್ತೆ ಭೂಷಿತನಾದ ನೆತ್ತಿ ಕೇಶಗಳೆಲ್ಲ ಸುತ್ತಿಕಟ್ಟಿದ ಮೇಲೆ ಸುತ್ತಿದನು ಕೌಸುಂಭ ರಕ್ತವಸ್ತ್ರಾ ॥ ೨ ॥ ಕುಂಕುಮಾದಿಗಳಿಂದ ವೆಂಕಟನು ಊರ್ಧ್ವಪುಂಡ್ರಾಂಕಿತನು ಆಧಿ ಅಕಳಂಕ ಕೇಸರ ಕುಂಕುಮಾಂಕಿತ ಶ್ರೀಗಂಧಪಂಕದಲಿ ವೈಘಚ್ಚಿ ಕಂಕಣವು ಇಟ್ಟ ಕರ ಪಂಕಜಂಗಳಿಗೆ ॥ ಟೊಂಕದಲಿ ಕಾಂಚಿಯನು ಬಿಂಕದಿಂದಲೆ ಬಿಗಿದು ಸಂಖ್ಯದಲ್ಲಿ ಎಲೆ ಅಡಿಕೆ ಸಣ್ಣ ಸುಣ್ಣದಕಾಯಿ ಶಂಖ ಸಮವೃತ್ತಿಕೆಯು ಕೊಂಕಯಿಲ್ಲದ ಕನ್ನಡಿ ಕುಂಕುಮದ ಕರಡಿಗೆಯು ಟೊಂಕದಲಿ ಕಟ್ಟಿದನು ವಸ್ತ್ರದಿಂದಾ ॥ ೩ ॥ ಕಂಠಿ ಮೊದಲಾಗಿರುವ ಕಂಠಭೂಷಣವೆಲ್ಲ ಕಂಠದಲಿ ಇಟ್ಟು ವೈಕುಂಠಪತಿ ತಾನು ಹದಿನೆಂಟು ಬಟ್ಟು ಜರತಾರಿ ಒಂಟೆ ಚಾದರವನ್ನು ಕಂಠದಲಿ ಚಲ್ಲಿ ರಿಪುಕಂಟಕಾಗಿರುವಂಥ ಒಂಟಿ ಖಡ್ಗದಲೆ ಹೊರಹೊಂಟು ಯೇರಿದ ಕುದುರೆ ಬಂಟನಾಗೀ ॥ ಅಂಟರಾಕಾಲ್ಕೊಡುತ ಕಂಠವನು ಮೇಲೆತ್ತಿ ಗಂಟಲವ ಬಿಗಿದು ನೂರೆಂಟು ಖ್ಯಾಕರಿಸುತಲೆ ಟಂಟಣನೆ ಜಿಗಿಯುತ್ತ ವೈಕುಂಠನಾಥನು ಯೆಂಬ ಬಂಟನಾ ಕುದುರೆ ಹೊರಗ್ಹೊಂಟಿತಾಗ ॥ ೪ ॥ ವನವನವ ಚರಿಸುತಲೆ ಘನಮಹಿಮ ವೆಂಕಟನು ವನದಲ್ಲಿ ಇರುವ ಬಹು ಘನಮೃಗಂಗಳನ್ಹೊಡೆದು ಘನವಾದ ಮದ್ದಾನೆಯನು ಕಂಡು ಅಲ್ಯೊಂದು ಕ್ಷಣವು ನಿಲ್ಲದೆ ಬೆನ್ನನು ಹತ್ತಿ ನಡದಾ ॥ ವನಜನಾಭನ ಭಯದಿ ವನಗಜವು ಸಾರ್ಧ ಯೋಜನವ ಓಡುತ್ತ ಮುಂದೆ ದಣಿದು ಬಿದ್ದಿತು ಜನಾರ್ದನನ ಸನ್ಮುಖವಾಗಿ ವಿನಯದಿಂದಲಿ ಸೊಂಡೆಯನು ಮೇಲೆ ಯೆತ್ತಿ ಗರ್ಜನವ ಮಾಡುತಲೆ ॥ ೫ ॥ ಘಡಘಡನೆ ಘರ್ಜಿಸುವ ಅಡವಿ ಆನೆಯ ಕಂಡು ಗಡಬಡಿಸಿದರು ಅಲ್ಲೆ ಕಡುಚಲ್ವೆಯರೆಲ್ಲ ಯಡವುತಲೆ ಮುಗ್ಗುತಲೆ ವಡಗೂಡಿ ಒಂದಾಗಿ ಗಿಡದ ಮರೆಯಲಿ ಪೋಗಿ ಅಡಗಿದರು ಬೇಗ ॥ ದೃಢಭಕ್ತಿಯಿಂದ ಜಗದೊಡೆಯ ಗೊಂದಿಸಿ ಗಜವು ನಡೆದು ಅಲ್ಲಿಂದ ಘೋರಡವಿಯಲಿ ಪೋಗುತಿರೆ ಬಿಡದೆ ಹಣಿಹಣಿಕಿ ನೋಡ್ಯಡಗಿದರು ಮತ್ತಲ್ಲೆ ಮಡದಿಯರ ನೋಡಿ ಹರಿ ನಡೆಸಿದನು ಕುದುರೆ ॥ ೬ ॥ ಕುದುರೆಯನು ಕಾಣುತಲೆ ಹೆದರಿ

ಚಪ್ಪಾಳಿಕ್ಕಿ ವದರಿದರು ಅವ್ಮಯ್ಯ ಚದುರೆ ನೋಡಿವನ್ಯಾರು ಕುದುರೆ ಯನು ಏರಿ ನವ್ಮೆದುರಿಗೆ ಬರುತಿರುವನೆದುರಿಗೆ ತೋರುತಿಹ. ಚದುರ ನಾಗೀ ॥ ಮಧುರ ನುಡಿದಳು ಆಗ ಚದುರೆ ಪದ್ಮಾವತಿಯು ಹೆದರ ಬೇಡಿರಿ ನೀವು ಬೆದರಿದೆರಳೆಗಳಂತೆ ಕುದುರೆಮೇಲಿವನ್ಯಾರು ಚದುರ ವೃತ್ತಾಂತವನು ಕೆದರಿ ಕೇಳಿರಿ ಅವನ ಇದಿರಿಘೋಗೀ ॥ ೭ ॥ ಅಂದ ಮಾತನು ಕೇಳಿ ಮಂದಗಮನೆಯರೆಲ್ಲ ಬಂದ ಪುರುಷನ ನೋಡಿ ಅಂದರೀ ಪರಿ ಆಗ ಸುಂದರನೆ ನೀನ್ಯಾರು ಇಂದು ಇಲ್ಲಿಗೆ ನೀನು ಬಂದ ಕಾರಣವೇನು ಮುಂದೆಲ್ಲಿ ಗಮನಾ ॥ ತಂದೆತಾಯಿಗಳ್ಯಾರು ಬಂಧು ಬಾಂಧವರ್ಯಾರು ಮಂದಿರವು ಎಲ್ಲ್ಯಂಟು ಮಂದಿ ಯೆಲ್ಲರು ಏನೆಂದು ಕರೆವರು ನಿನಗೆ ಚಂದಾಗಿ ಕುಲಗೋತ್ರ ಒಂದು ಬಿಡದಲೆ ನಮ್ಮ ಮುಂದೆ ನೀ ಪೇಳೋ ॥ ೮ ॥ ಇಂದುಮುಖಿಯರ ಮಾತಿಗಿಂದಿರೇಶನು ನುಡಿದ ಇಂದು ನಮ್ಮ ಕಾರ್ಯ ನೃಪನಂದಿನಿಯ ಬದಿಲುಂಟು ಮುಂದೆ ಕೇಳಿರಿ ನಮ್ಮ ಚಂದಾದ ವೃತ್ತಾಂತ ಒಂದೊಂದು ಬಿಡದೆ ಕ್ರಮದಿಂದ ಪೇಳುವೆನೂ ॥ ಚಂದ್ರಕುಲ ವಸುದೇವ ತಂದೆ ದೇವಕಿ ತಾಯಿ ಬಂಧು ತಾ ಬಲರಾಮ ಬಾಂಧವರು ಪಾಂಡವರು ಇಂದುಮುಖಿ ಸುಭದ್ರೆ ಯೆಂದೆನಿಸುವಳು ತಂಗಿ ಸುಂದರಾರ್ಜುನ ನಮ್ಮ ಹೊಂದಿರ್ದ ಬೀಗ ॥ ॥ ೯ ॥ ಕೃಷ್ಣವೇಣಿಯರು ನೀವಷ್ಟು ಕೇಳಿರಿ ನಾವು ಕೃಷ್ಣಪಕ್ಷದಲಿ ನಾ ಪುಟ್ಟಿರ್ದ ಕಾರಣದಿ ಕೃಷ್ಣನೆಂತೆಂದು ಹೆಸರಿಟ್ಟು ಕರೆವರು ಯೆನಗೆ ಕೃಷ್ಣ ವರ್ಣದಿ ಮತ್ತು ಕೃಷ್ಣನೆಂಬುವರೂ ॥ ಇಷ್ಟು ವೃತ್ತಾಂತವೆ ಶ್ರೇಷ್ಠ ಕರ್ಣಾಭರಣ ಕೊಟ್ಟೆನಿದು ಕಿವಿಯಲ್ಲಿ ಇಟ್ಟು ಬಹು ಸಂತೋಷಪಟ್ಟು ನೃಪನಂದಿನಿಯು ಶ್ರೇಷ್ಠಾದ ವೃತ್ತಾಂತವಷ್ಟು ಪೇಳಿರಿ ಯೆನಲು ಥಟ್ಟನೆ ನುಡಿವಳಾ ಧಿಟ್ಟೆ ಪದ್ಮಾವತಿಯು ಸ್ಪಷ್ಟ ತಾನೆ ॥ ೧೦ ॥ ಭೋ ಕಿರಾತಾಧಿ ಪನೆ ನೀ ಕೇಳು ನಮ್ಮ ಸುವಿವೇಕದ ವೃತ್ತಾಂತಾ ಲೋಕದಲಿ ಮಾನಿತ ನಿಶಾಕರನ ವಂಶ ತಿಳಿ ಶ್ರೀಕರಾತ್ರಿಯು ಗೋತ್ರ ಆಕಾಶನೃಪ ತಂದೆ ಆಕೆ ನಮ್ಮ ತಾಯಿಯೆಂಬಾಕೆ ಧರಣೀದೇವಿ ತಾ ಕಕ್ಕನೆನಿಸುವನು ತೊಂಡ ಮಾನಾ ॥ ಏಕಾಕಿ ವಸುದಾನ ತಾ ಖೂನದಲಿ ತಮ್ಮ ನಾ ಕಮಲದಿಂದ



ಬಂದಾಕೆ ಪದ್ಮಾವತಿಯು ನೀ ಕೇಳಿ ನಡಿಯೆನಲು ಶ್ರೀಕಾಂತ ನಗು ನಗುತ ಆಕೆಯಾ ಮ್ಯಾಲ್ಸ್ವಲ್ಪ ಧುಮುಕಿಸಿ ನೋಡಿದ ಕುದುರೆ ಆಕಾಶ ನೃಪಪುತ್ರಿ ತಾ ಕೋಪವನು ಮಾಡಿ ಏಕೆ ನೋಡುವಿರಿವನ ನೂಕಿ ಹಿಂದಕೆ ಯೆಂದಳಾ ಕಾಲದಲಿ ಹರಿ ವಿವೇಕದಲೆ ನುಡಿದಾ ॥ ೧೧ ॥

**ರಾಗ ಶಂಕರಾಭರಣ, ಬಿಲಂದಿತಾಳ.**

ಇಷ್ಟು ಯೆನ್ನ ಮ್ಯಾಲೆ ಯಾಕೆ ಶಿಟ್ಟು ಮಾಡುವೀ ॥ ಬಟ್ಟಕುಚದ ಬಾಲೆ ಬಹಳ ನಿಷ್ಠುರಾಡುವೀ ॥ ೧ ॥ ಧಿಟ್ಟಪುರುಷ ನೀನು ನಡತೆಗೆಟ್ಟು ಇರುವರೆ ॥ ಖೊಟ್ಟಿ ಕುದುರೆ ಯೇರಿ ಮೈಯ ಮುಟ್ಟಬರುವರೆ ॥ ೨ ॥ ಮೆಚ್ಚಿ ಬಂದೆ ನಿನಗೆ ನಾನು ಹೆಚ್ಚಿನೈಂಗಳೆ ॥ ಇಚ್ಛೆಪೂರ್ಣ ಮಾಡು ನೀನು ಮಚ್ಛಕಂಗಳೆ ॥ ೩ ॥ ಹೆಚ್ಚುಕಡಿಮೆ ಆಡದೀರು ಹೆಚ್ಚಿನಾತನೆ ॥ ಎಚ್ಚರಿಲ್ಲ ಮೈಯ ಮ್ಯಾಲೆ ಹುಚ್ಚುಪುರುಷನೇ ॥ ೪ ॥ ಏನು ಹೆಚ್ಚು ಕಡಿಮೆ ಆಡಿದೆನು ಅನುಚಿತಾ ॥ ನೀನು ಕನ್ಯಾ ನಾನು ವರನು ಯೇನು ಅನುಚಿತಾ ॥ ೫ ॥ ಮೂಢ ನೀನು ಇಂಥ ಮಾತು ಆಡೋದುಚಿತವೆ ॥ ಬೇಡ ಅರಸಿಘೇಳಿ ನಿನಗೆ ಬೇಡಿ ಬಿಗಿಸುವೆ ॥ ೬ ॥ ಮುಡದಿ ನಿನ್ನ ಕಡೆಯ ಗಣ್ಣು ಕುಡಿಯ ಹುಬ್ಬುವೆ ॥ ಕಡಿಯದಂಥ ಬೇಡಿ ಯೆನಗೆ ಕಡೆಗೆ ಅಲ್ಲವೆ ॥ ೭ ॥ ಮಂದಮತಿಯೆ ಉಳುಹಿಕೊಳ್ಳೊ ಇಂದು ಪ್ರಾಣವಾ ॥ ತಂದೆ ಕಂಡರೀಗ ನಿನ್ನ ಕೊಂದುಹಾಕುವಾ ॥ ೮ ॥ ಜಾಣೆ ನಿನ್ನ ಬಿಡೆನು ಎನ್ನ ಪ್ರಾಣಹೋದರೂ ॥ ಪ್ರಾಣದರಸಿಯೆನಿಸು ಪಟ್ಟರಾಣಿ ಆಗಿರೂ ॥ ॥ ೯ ॥ ತಂದೆತಾಯಿ ಬಿಟ್ಟು ಮರಣ ಇಂದು ವ್ಯರ್ಥವೂ ॥ ಹಂದಿ ನಾಯಿ ಹದ್ದು ಕಾಗೆ ತಿಂದುಬಿಡುವವೂ ॥ ೧೦ ॥ ಎನ್ನ ಫಣೆಯಲಿದ್ದ ಲಿಖಿತ ಮುನ್ನ ತಪ್ಪದೂ ॥ ಚನ್ನವಾಗಿ ನಿನ್ನ ಕೂಡಿ ಇನ್ನು ಇರು ವಮೂ ॥ ೧೧ ॥ ಸೊಲ್ಲ ಕೇಳಿ ಶಿಟ್ಟಿನಿಂದ ನಿಲ್ಲೊ ಯೆಂದಳೂ ॥ ಎಲ್ಲ ಗೆಳತೆರಿಂದ ಕೂಡಿ ಕಲ್ಲ ಒಗೆದಳೂ ॥ ೧೨ ॥ ಕಲ್ಲು ತಾಗಿ ಕುದುರೆ ಭೂಮಿಯಲ್ಲಿ ಬಿದ್ದಿತೂ ॥ ಬಲ್ಲಿದಾನಂತಾದ್ರೀಶನಲ್ಲಿ ಸ್ಮರಿಸಿತೂ ॥ ೧೩ ॥

### ವಚನ.

ಶ್ರೀಕಾಂತ ತಾ ಮುಂದೆ ಲೌಕಿಕವ ತೋರಿಸುತ ಆ ಕುದುರೆಯನು ಬಿಟ್ಟು ನಾಲ್ಕು ಕಡೆ ನೋಡುತಲೆ ವ್ಯಾಕುಲನು ಆಗುತ ವಿವೇಕದಲಿ ಹೀಗೆಂದ ಏಕೆ ಈ ಪರಿ ಆಯಿತೀ ಕಾಲದಲ್ಲೀ ॥ ಲೋಕದಲಿ ತಾಯಿಯೆಂಬಾಕೆ ಪರದೇವತೆಯು ನಾ ಕಾಲಬೀಳದಲೆ ಆ ಕಾಲದಲಿ ಹೊರಟೆ ಆ ಕಾರಣದಿ ಯೆನಗೆ ಸೋಕಿತೀ ಸಂಕಟವು ಮಾಡಿದಾ ಕರ್ಮಫಲ ದೊರೆಯದಿರದೂ ॥ ೧ ॥ ಆ ಕಾಲಖೀಗೆಂದು ಕಾಲಹೆಜ್ಜೆಯ ಹಾಕಿ ಗಿರಿಯೇರುತಲೆ ತಾನು ಗೃಹಾಕಾರವಾಗಿರುವ ಏಕಾಂತ ಹುತ್ತಿನಲಿ ಮೂಕತನದಲಿ ಮುಸುಕ ಹಾಕಿ ಮಲಗಿದ ತಾನು ವೈಕುಂಠಪತಿ ಶೇಷಶಾಯಿಯಂತೇ ॥ ಲೋಕದಲಿ ವಿಖ್ಯಾತ ಶ್ರೀಕರಾನಂತಗಿರಿ ಆಕ್ರಮಿಸಿ ಮುಂದಕೆ ಅನೇಕವಿಧ ಭಕ್ತರಿಗೆ ಬೇಕಾದ ವರಗಳನು ತಾ ಕರೆದು ಕೊಡುವವನ ಸಿರಿಕರುಣದಿ ಆಯಿತು ನಾಲ್ಕು ಅಧ್ಯಾಯಾ ॥ ೨ ॥

**ನಾಲ್ಕನೆಯ ಅಧ್ಯಾಯವು ಸಂಪೂರ್ಣವು.**

---

॥ ಪದ್ಮಾವತೀಮನೋಹಾರಿಣೇ ನಮಃ ॥

## ಐದನೆಯ ಅಧ್ಯಾಯವು.

---

ಕಾಮಾರ್ತೋ ಬಕುಲಾವಾಕ್ಯಮೋದಿತೋ ಲೋಕಮೋಹಕಃ ।
ಆಕಾಶನೃಪಗೇಹಂ ತಾಂ ಪ್ರೇಷಯನ್ ಪಾತು ಮಾಧವಃ ॥

**ರಾಗ ಯರಕಲಕಾಂಬೋಧಿ, ಅಟತಾಳ.**

ಸೋಕಿತು ಕಾಮನ ಘಾಳಿ ಆಕಾಶನ ಪುತ್ರಿಗೆ । ವೈಕುಂಠೇಶನು ತಿರಿಗಿ ವೆಂಕಟಗಿರಿ ಏರಲೂ ॥ ಪಲ್ಲ ॥ ಪದ್ಮನಾಭನ ಸ್ಮರಿಸಿ ಬಿದ್ದಳು



ಮೂರ್ಛಿತಳಾಗೀ । ಸದ್ದುಮಾಡಿದರಲ್ಲಿ ಇದ್ದ ಗೆಳತಿಯರೆಲ್ಲ ಮುದ್ದುಮುಖದವಳೆ ನೀ ಯೆದ್ದು ಮಾತಾಡೆಂದರು । ಪದ್ಮಿನಿಯು ತಾ ಕೇಳಿ ಯೆದ್ದು ನುಡಿಯದೆ ಇರಲು । ಸಿದ್ಧಮಾಡಿ ಬೇಗೊಬ್ಬ ಬುದ್ಧಿವಂತೆಯ ಕಳುಹಿ ಗದ್ದಲವು ಮಾಡದೆ ಅಂದಣವನು ತರಿಸಿ । ಪದ್ಮಗಂಧಿಯ ಕೊಂಡು ಎದ್ದು ನಡೆದರು ಪುರಕೆ । ಸುದ್ದಿ ಹರವಿತು ಅಲ್ಲೆ ಗದ್ದಳಾಯಿತು ಬಹಳಾ ॥ ೧ ॥ ಬಂದಳಲ್ಲಿಗೆ ತಾಯಿ ಅಂದಳೀ ಪರಿ ನೋಡಿ । ಇಂದು ಎಲ್ಲಿಗೆ ಚಿಕ್ಕ ಕಂದಮ್ಮ ನೀ ಪೋಗಿದ್ದೇ । ಚಂದದ ನಿನ್ನ ಮುಖ ಇಂದು ಬಾಡಿಹುದೇಕೆ । ಇಂದು ಮೈಯೊಳು ಜ್ವರ ಬಂದಿಹುದೇಕಮ್ಮಯ್ಯಾ । ಮುಂದೆ ಮಾತಾಡದಿರಲು ತಂದೆ ಕೇಳಿದನಾಗ । ಸುಂದರಿಯಳೆ ದಾರೇನಂದರಮ್ಮಯ್ಯ ನಿನಗೇ । ಇಂದು ಅವರನ ಬಿಡದೆ ಕೊಂದುಹಾಕುವೆ ಪೇಳು । ಅಂದ ಮಾತಿಗೆ ತಾನು ಒಂದು ಮಾತಾಡಲೊಲ್ಲಳು ॥ ೨ ॥ ತಿಳಿಯುವಲ್ಲದು ಎಂದು ಬಳಲಿ ಆಕಾಶರಾಜಾ । ಕಳವಳಿಸುತ ಕರೆಕಳಸಿ ಬಲ್ಲವರನಾ । ತಿಳಿಯಬಲ್ಲವರೆಲ್ಲ ತಿಳಿದು ಹೇಳಿರಿ ಯೆಂದಾ । ಕೆಲವರಂದರು ಪಿತ್ತ ತಲೆಗೆ ಏರಿಹುದೆಂದು । ಕೆಲವರಂದರು ಭೂತ ಬಲಿಯು ಚೆಲ್ಲಿರಿ ಯೆಂದು । ಕೆಲವರಂದರು ಗ್ರಹಗಳ ಬಾಧೆಯಿರುವದು । ಉಳಿದ ಮುಂದಿಗೆ ಮತ್ತೆ ತಿಳಿಯಲಾಗದಾಯಿತು । ಚೆಲುವನಂತಾದ್ರೀಶನ ಚೆಲುವಿಕೆಯನೆ ಕಂಡೂ ॥ ೩ ॥

### ವಚನ.

ಆ ಕಾಲದಲಿ ಮುಂದೆ ಆಕಾಶರಾಜ ಬಹು ಶೋಕವನು ಮಾಡುತಲೆ ತೋಕನ ಕಳುಹಿ ಸುರಲೋಕಗುರು ಯೆನಿಸುವನ ತಾ ಕರಿಸಿ ಕೇಳಿದನು ಮೂಕಳಾದಳು ಪೇಳು ಯಾಕೆ ಯೆನ್ನ ಮಗಳೂ ॥ ನಾಕೇಶಗುರು ಹೀಗೆ ತಾ ಕೇಳುತಲೆ ನುಡಿದ ಆಕಾಶನೃಪ ಚಿಂತೆ ಯಾಕೆ ಬ್ರಾಹ್ಮಣರ ನೀ ಕರಿಸಿ ಶಿವಗೆ ಅಭಿಷೇಕ ಮಾಡಿಸು ರುದ್ರ ಏಕಾದಶಾವರ್ತಿ ಏಕಚಿತ್ತದಲೀ ॥ ೧ ॥ ಏಸೊಂದು ಚಿಂತೆಗಳ ರಾಶಿ ದೂರಾಗುವದು ಲೇಸಾಗಿ ತಿಳಿಯೆಂದು ತಾ ಸ್ವರ್ಗಪುರಕ್ಹೋದ ಆ ಸಮಯದಲಿ

ಉರ್ವೀಶ ಭಕುತಿಯಿಂ ಬಿನ್ನೈಸಿ ಕರಕಳಿಸಿದನು ಭೂಸುರರನೆಲ್ಲಾ ॥ ಆಸನಾದಿಗಳಿಂದ ಲೇಸಾಗಿ ವರವಸ್ತ್ರಭೂಷಣಾದಿಗಳಿಂದ ಭೂಸುರರಿಗರ್ಚಿಸಿ ಅಶೇಷರಿಗೆ ದಕ್ಷಿಣೆ ವಿಶೇಷವನು ಕೊಟ್ಟು ಸಂತೋಷವನು ಪಡಿಸಿ ಕೈಲಾಸಪತಿಪೂಜೆ ಚಿತ್ತೈಸಿ ಮಾಡಿರಿ ಯೆಂದು ಆಶು ಕಳುಹಿದ ನಗಸ್ತ್ರೀಶ್ವರನಾಲಯಕೇ ॥ ೨ ॥

## ರಾಗ ಶಂಕರಾಭರಣ, ಆದಿತಾಳ.

ಶ್ರೀವೆಂಕಟಾದ್ರಿಯೊಳ್ ದೇವ ತಾ ಮಲಗಿರಲು ಕೇವಲ ಚಿಂತೆಯಿಂದಲ್ಲೆ ॥ ಆವತ್ತಿಗಾತನಾ ಸೇವೆಗೆ ನಡೆದಳು ದೇವಿ ಬಕುಲಾವತಿ ತಾನೂ ॥ ೧ ॥ ವರ ಷಡ್ರಸದನ್ನ ಪರಿಪರಿ ಸಾಹಿತ್ಯ ಹರಿವಾಣದಲ್ಲಿಟ್ಟುಕೊಂಡು ॥ ಹರಿಯ ಸಮೀಪಕ್ಕೆ ಹರುಷದಿ ಬಂದಳು ಕರವು ಇದ್ದಲ್ಲಿ ಗೋವಿನಂತೆ ॥ ೨ ॥ ಆಲಯದಿ ಜಗತ್ಪಾಲ ಮಲಗಿದ್ದು ಕಂಡು ಬಾಲೆ ತಾ ಮಾತಾಡಿದಳೂ ॥ ಏಳಯ್ಯಾ ಉಣಲೇಳೊ ಬಾಲಯ್ಯಾ ವೆಂಕಟ ಬಹಳ್ಹೊತ್ತು ಆಯಿತು ಇಂದು ॥ ೩ ॥ ಮತ್ಸ್ಯಮೂರುತಿ ಏಳೊ ಸ್ವಚ್ಛ ಕೂರ್ಮನೆ ಏಳೊ ಹೆಚ್ಚಿನ ವರಹ ನೀ ಏಳೊ ॥ ವತ್ಸ ಪ್ರಹ್ಲಾದಗೆ ಮೆಚ್ಚಿದಾತನೆ ಏಳೊ ಅಚ್ಯುತ ವಾಮನ ಏಳೊ ॥ ೪ ॥ ಶುದ್ಧ ಭಾರ್ಗವ ಏಳೊ ಬಿದ್ದಂಥಾ ಶಿಲೆಯನ್ನು ಉದ್ಧರಿಸಿದಾತನೆ ಏಳೊ ॥ ಉದ್ಧವಸಖ ಏಳೊ ಬೌದ್ಧವತಾರ ಏಳೊ ಮುದ್ದು ಹಯವಾಹನ ಏಳೊ ॥ ೫ ॥ ಇಷ್ಟು ಮಾತಿಗೆ ತಾ ಒಂದಿಷ್ಟು ಉತ್ತರ ಕೊಡದೆ ಸೃಷ್ಟಿಕರ್ತನು ಸುಮ್ಮನಿದ್ದಾ ॥ ಥಟ್ಟನೆ ಹರಿವಾಣ ಇಟ್ಟಳು ಕೆಳಗಲ್ಲೆ ದಿಟ್ಟೆ ನಡದಳು ಬದಿಯಲ್ಲಿ ॥ ೬ ॥ ಅತ್ಯಂತ ಗುಣದವನ ಅಂತ ತಿಳಿಯಬೇಕು ಯೆಂತ ಮುಸುಕ ತೆಗೆದಳೂ ॥ ಚಿಂತೆಯ್ಲುಲೆ ಮಲಗಿರುವಾನಂತಾದ್ರೀಶನ ಕಂಡು ಅಂತಃಕರುಣದಿ ನುಡಿದಳೂ ॥ ೭ ॥

## ರಾಗ ಕಾಪಿ, ಅಟತಾಳ.

ಯಾಕೆ ಮಲಗಿದಿ ನೀ ಏಳೊ । ಅಣ್ಣಯ್ಯಾ ವೆಂಕಟ ॥ ಯಾಕೆ ಮಲಗಿದಿ ಏಳೋ । ಏನು ಚಿಂತೆಯು ಪೇಳೊ । ಲೋಕ ಸಾಕುವ





ದಯಾಳೊ ॥ ಅಣ್ಣಯ್ಯಾ ವೆಂಕಟ ॥ ಪಲ್ಲ ॥ ಬಹಳ ಬಳಲಿದೀಯೊ ಹಸಿದು ಮಾತಾಡದಂಥಾ ಮೂಲಕಾರಣವೇನಿದು ॥ ಹಾಲು ಸಕ್ಕರೆ ತುಪ್ಪಾ ಯಾಲಕ್ಕೀಪರಮಾನ್ನಾ ಬಾಲಯ್ಯಾ ನೀನು ಉಣಲೇಳೊ ॥ ॥ ೧ ॥ ತಲೆಯು ನೋಯುವದು ಏನೊ ವನದೊಳು ಹೆಬ್ಬುಲಿಯ ಕಂಡಂಜಿದಿಯೇನೋ ॥ ನೆಲೆಯು ತಿಳಿಯದು ನಿನ್ನಾ ಪ್ರಳಯಕಾಲಕ್ಕೆ ಆಲದೆಲೆಯೊಳು ಮಲಗಿದವನೊ ॥ ೨ ॥ ಹೊತ್ತು ಬಹಳಾಯಿತು ಏಳೊ ಎಂದಿಗೂ ಹಗಲ್ಹೊತ್ತು ಮಲಗಿದವನಲ್ಲೊ ॥ ಹೆತ್ತ ತಾಯಿಯ ಆಣೆ ಸತ್ಯಾಗಿ ನೀನು ಪೇಳೊ ಚಿತ್ತವೈಕಲ್ಯವು ಯಾಕೆ ॥ ೩ ॥ ತಂದೆ ತಾಯಿಗಳು ನಿನ್ನಾ ನೋಡಿದರೆಷ್ಟು ನೊಂದುಕೊಂಬುವರೊ ಮುನ್ನ ॥ ಕಂದಯ್ಯಾ ನೀನು ಯಾವ ಸುಂದರಿಯಳ ಕಂಡು ಇಂದು ಮೋಹಿತನಾಗಿರುವೀ ॥ ೪ ॥ ವರ ತೇಜಿಯನೇರಿಕೊಂಡು ವನವನದಲಿ ತಿರಿಗಿ ಬಾಹುವದು ಕಂಡು ॥ ಸ್ಮರನ ತಾಪದಿ ಯಾವಾ ಪರಮಪುಣ್ಯವತಿಯು ಮರುಳುಮಾಡಿದಳೊ ನಿನ್ನಾ ॥ ೫ ॥ ದುಃಖವ್ಯಾತಕೇಳೂ ನೀನು ಮಾಡುವೆ ಅದರ ತಕ್ಕ ಉಪಾಯವ ನಾನು ॥ ಚಿಕ್ಕ ಬಾಲನೆ ನೀನು ನಕ್ಕು ಕೆದಲಾಡಿದರೆ ಅಕ್ಕರವಾಗುವದೆನಗೆ ॥ ೬ ॥ ನಿನ್ನ ಭಾವವು ಏನಯ್ಯಾ ಬೇಗನೆ ಎದ್ದು ಎನ್ನ ಮುಂದೆ ನೀ ಪೇಳಯ್ಯಾ ॥ ಚನ್ನಾಗಿ ನಾ ಮಾಡುವೆ ಮುನ್ನ ಸಂಶಯ ಬಿಡು ಚನ್ನಿಗಾನಂತಾದ್ರೀಶನೆ ॥ ೭ ॥

## ವಚನ.

ಈ ರೀತಿ ನುಡಿ ಕೇಳಿ ಶ್ರೀರಮಾರಮಣ ಕಣ್ಣೀರು ವರಸುತಲಿದ್ದು ಈ ರೀತಿ ಲೌಕಿಕವ ತೋರುತಲೆ ತಾ ನುಡಿದ ಕೀರವಾಣಿಯೆ ಕೇಳು ಆರು ಎನ್ನ ದುಃಖಪರಿಹಾರ ಮಾಡುವರು ॥ ಘೋರ ದುಃಖವು ತನಗೆ ಮೀರಿ ಬಂದರೆ ಮುನ್ನ ಆರು ತನ್ನವರಿಲ್ಲ ಆರಿಗುಸುರಲೀ ನಾನು ಆರಿಗ್ಹೇಳಲಿ ಮತ್ತೆ ನೂರು ಮಾತುಗಳ್ಯಾಕೆ ಸಾರಿ ಹೇಳುವೆ ನಿನಗೆ ಸಾರಾಂಶಮಾತೂ ॥ ೧ ॥ ನೀನೆ ತಾಯಿಯು ಎನಗೆ ನೀನೆ ತಂದೆಯು ಮತ್ತೆ ನೀನೆ ಎನಗ್ಹಿರಿಯಣ್ಣ ನೀನೆ ಸೋದರಮಾವ ನೀನೆ ಎನಗುದ್ಧ

ವನು ನೀನೆ ಎನಗಕ್ರೂರ ನೀನೆ ಗಜರಾಜೇಂದ್ರ ನೀನೆ ಪ್ರಹ್ಲಾದಾ ॥ ನೀನೆ ಎನಗಜವಿುಳನು ನೀನೆ ವರಧ್ರುವರಾಯ ನೀನೆ ಎನಗರ್ಜುನನು ನೀನೆ ದ್ರೌಪದಿದೇವಿ ನೀನು ಸರ್ವವು ಎನಗೆ ನಾನು ನಿನ್ನವನು ತಿಳಿ ನೀನೆ ಸರಿ ಎನ್ನ ಅಭಿಮಾನ ರಕ್ಷಕಳೂ ॥ ೨ ॥ ನಿನ್ಹೊರತು ಮತ್ತಿನ್ನು ಎನ್ನ ಹಿತಕರು ಎಂಬೊರನ್ಯರನು ನಾ ಕಾಣೆ ನಿನ್ನ ಮುಂದಾಡುವದ ಕಿನ್ನು ಸಂಶಯುವೇಕೆ ಎನ್ನ ಮನಸಿನ ದುಃಖವನ್ನು ಪೇಳುವೆ ಕೇಳು ಚೆನ್ನಾಗೀ ॥ ಘನ್ನವಾಗಿರುವ ಅರಣ್ಯದೊಳು ನಾ ಒಂದು ಹೆಣ್ಣು ಕಂಡೆನೆ ತಾಯಿ ಮುನ್ನವಳ ರೂಪ ಲಾವಣ್ಯ ಪೇಳುವೆ ಲಿಂಬೆಹಣ್ಣಿ ನಂದದಲಿ ಮೈಯ ಬಣ್ಣ ಇರುವದು ಮುಖವು ಹುಣ್ಣಿಮೆಯ ಚಂದ್ರಾ ॥ ॥ ೩ ॥ ಸಣ್ಣ ಬಳಕುವ ನಡುವು ಸಣ್ಣಕುಚ ಕುಡಿಹುಬ್ಬು ಕಣ್ಣುಮೂ ಗಿಲಿ ಚಲುವೆ ಬಣ್ಣಿಸಲಿ ಎಷ್ಟು ಹಿಂದಿನ್ನು ಸಾವಿರಸಂಖ್ಯ ಜನ್ಮದಲಿ ಮಾಡಿದ್ದು ಪುಣ್ಯ ಇದ್ದರೆ ಅಂಥ ಹೆಣ್ಣು ದೊರಕುವದೂ ॥ ಅನ್ಯಾಯ ದಲಿ ಎನ್ನ ಕಲ್ಲು ಕಲ್ಲಿಲೆ ಒಗದಳೆನ್ನ ಕುದುರೆಯು ಪ್ರಾಣವನು ಬಿಟ್ಟಿತು ಅಲ್ಲಿ ಪುಣ್ಯದಾ ತಾಯಿ ನಿನ್ನ ಪುಣ್ಯದಿಂದಲೆ ಉಳಿದೆ ಮುನ್ನ ವಳ ಹೊರತು ಮನ ಉಣಲೊಲ್ಲದು ನಿದ್ರೆ ಕಣ್ಣಿಗಿನ್ನೆಲ್ಲಿ ॥ ೪ ॥ ನಾನು ಹಿಂದಕೆ ಸುತಗೆ ಜಾಣ ಸೃಷ್ಟಿಯ ಮಾಡು ನೀನು ಎಂದುದು ತಪ್ಪು ಅವನು ಈ ಕಾಲದಲೆ ನಾನು ಮೋಹಿಸುವಂಥ ಜಾಣೆಯನು ಪುಟ್ಟಿಸಿದ ನಾನು ಅಪಕೃತಿ ಅವಗೇನು ಮಾಡಿದ್ದೆ ॥ ಏನು ಮಾಡಲಿ ಇನ್ನು ಏನು ಪಾಯವು ಎನ್ನ ಮಾನವನು ಕಳೆದಂಥ ಮಾನಿನಿಯ ತರುವದಕೆ ನೀನೆ ಸರಿ ಹೆಬ್ಬುಲಿಯು ನೀನೆ ತಾರದೆ ಇರಲು ನಾನು ಬದುಕುವನಲ್ಲ ಖೂನ ಪೇಳುವೆನೂ ॥ ೫ ॥ ಮೀನಾಕ್ಷಿ ತಿಳಿ ಜೀವದಾನ ಮಾಡಲು ದೇವಯಾನ ಬರುವದು ಹೆಚ್ಚು ಏನು ಹೇಳಲಿ ಹಿರಿಯತನ ನಿನ್ನಲ್ಲಿ ಉಂಟು ಕ್ಷೋಣಿಯಲಿ ಕೀರ್ತಿಪಡಿ ನೀನು ಇದು ಒಂದು ಕಲ್ಯಾಣ ವನು ಕಟ್ಟೀ ॥ ದಾನದೊಳು ಶ್ರೇಷ್ಠ ಗಜದಾನ ಸಾವಿರ ಅಶ್ವದಾನ ದಶಸಾಹಸ್ರದಾನ ಪಾತ್ರರಿಗೆ ಗೋದಾನ ಸಾವಿರಕೋಟಿ ಮಾನದಲೆ ಇಷ್ಟಕ್ಕೆ ಸಮಾನ ತಿಳಿ ಒಂದು ಕಲ್ಯಾಣ ಕಟ್ಟಿದರೆ ॥ ೬ ॥



### ರಾಗ ಸಾರಂಗ, ಬಿಲಂದಿತಾಳ.

ದೇವೇಶನು ನುಡಿದಂಥ ಆ ವಾಕ್ಯಕ್ಕೆ ಬಕುಲಾದೇವೀ ತಾ ನುಡಿ ದಳು ಆ ಕಾಲಕ್ಕೆ ಹೀಗೆ ॥ ದೇವಾಧೀಶನೆ ನಿನ್ನಾ ಕೇವಲ ಮರುಳು ಈವತ್ತಿಗೆ ಮಾಡಿದಳು ಯಾವಾಕೆ ಅವಳೂ ॥ ೧ ॥ ಯಾವಲ್ಲಿರುವಳಾಕೆ ಯಾವಾತನ ಮಗಳು ಪೂರ್ವಜನ್ಮದಲಾಕೆ ಯಾವಾಕೆ ಪೇಳೂ ॥ ಯಾವ ಕಾರಣದಿಂದ ಈ ಉರ್ವಿಯೊಳು ಭಾವಿಸಿ ಬಂದಿಹಳು ಆ ವಾರ್ತೆ ಪೇಳೋ ॥ ೨ ॥ ಅಂತಃಕರಣವ ಮಾಡುವಂಥಾ ಜನನಿಯಳಾ ಇಂಥಾ ಮಾತನು ಲಕ್ಷ್ಮೀಕಾಂತ ತಾ ಕೇಳೀ ॥ ಅಂತರಂಗದಲಿರುವಾ ವೃತ್ತಾಂತ ಗಳೆಲ್ಲಾ ಚಿಂತಿಸಿ ನುಡಿದಾ ಶ್ರೀಮದನಂತಾದ್ರೀಶಾ ॥ ೩ ॥

### ವಚನ.

ಪೂರ್ವದಲಿ ಶ್ರೀರಾಮದೇವ ಸೀತೆಯ ಕೂಡಿ ತಾ ವನದಲ್ಲಿರು ತಿರಲು ರಾವಣನು ಇಬ್ಬರಿಗೆ ತಾ ವಿಯೋಗವ ಮಾಡಿ ದೇವಿಯನು ಅಪಹರಿಸಿ ತಾ ಒಯ್ಯಬೇಕೆಂಬೋ ಭಾವದಲಿ ಬಂದಾ ॥ ಆ ವೇಳೆಯಲಿ ರಾಮದೇವಪತ್ನಿಯು ತನ್ನ ರೂಪ ನಿರ್ಮಿಸಿ ಅಗ್ನಿದೇವಪತ್ನಿಯಲಿದ್ದ ಶ್ರೀವೇದವತಿಯನ್ನ ದೇವೇಂದ್ರನ ಸಹಿತ ಆವಾಹನವ ಮಾಡಿ ತಾ ವಾಸಮಾಡಿದಳು ಕೈಲಾಸದಲ್ಲೀ ॥ ೧ ॥ ಮಂದಮತಿ ರಾವಣನು ಸುಂದ ರಾಕೃತಿ ಒಯ್ದ ಮುಂದೆ ರಾಮನು ಅವನ ಕೊಂದು ಆ ಸೀತೆಯನು ತಂದು ಅಪವಾದಭಯದಿಂದ ತಾನಗ್ನಿಯಲಿ ಚಂದದಿ ಪ್ರವೇಶ ತ್ವರ ದಿಂದ ಮಾಡಿಸಿದಾ ॥ ಬಂದರಿಬ್ಬರು ಅಗ್ನಿಯಿಂದ ಸೀತೆಯರಾಗ ಚಂ ದಾಗಿ ನೋಡಿ ನಿಜಸುಂದರಿಗೆ ತಾ ನುಡಿದ ಇಂದು ನಿನ್ನಂಥಾಕೆ ಬಂದ ವಳು ಇವಳ್ಯಾರು ಎಂದ ಮಾತಿಗೆ ಸೀತೆ ಅಂದಳ್ಹೀಗೆ ॥ ೨ ॥ ಲೋಕ ನಾಥನೆ ಕೇಳು ಈಕೆ ತಿಳಿ ವೇದವತೀ ಈಕೇನೆ ಹಿಂದಕೆ ಅಶೋಕವನ ದಲಿ ಬಹಳ ಶೋಕಬಟ್ಟಂಥಾಕೆ ಈಕೆಯ ಸ್ವೀಕರಿಸು ಈ ಕಾಲಕೆ ಎನ ಮೇಲೆ ನೀ ಕರುಣದಿಂದಾ ॥ ಕಾಕುಸ್ಥನೀ ಮಾತು ತಾ ಕೇಳಿ ಮೌನ ದಲಿ ಹೇ ಕಾಂತೆ ನೀ ಕೇಳು ಏಕಪತ್ನಿಯವ್ರತವು ಈ ಕಾಲಕೆನಗುಂಟು


Rarest Archiver

ಈಕೆ ಕಲಿಯುಗದಲ್ಲಿ ಆಕಾಶನೃಪಪುತ್ರಿ ಆಗುವಳು ಮುಂದೆ ॥ ೩ ॥ ಆ ಕಾಲದಲಿ ನಾನು ವೆಂಕಟೇಶನು ಆಗಿ ಈಕೆಯನು ವಿಧಿಯಿಂದ ಸ್ವೀಕರಿಸುವೆಂತೆಂದ ಆಕೆ ಪದ್ಮಾವತಿಯು ನೀ ಕೇಳು ಎಲೆ ತಾಯಿ ಆಕೆಯ ಕೂಡಿಸು ವಿವೇಕದಿಂದಾ ॥ ಈ ಕಾರ್ಯವನು ಮಾಡು ನೀ ಕಾಲಗಳೆಯದಲೆ ಯಾಕೆ ತಡ ನಿನ್ನ ಮನಕೆ ಬೇಕಾದ ಕುದುರೆಯಲಿ ನೀ ಕುಳಿತು ನಡಿಯೆಂದ ಆಗ ಬಕುಳಾವತಿಯು ತಾ ಕೇಳಿ ನುಡಿದಳಾ ವೈಕುಂಠಪತಿಗೆ ॥ ೪ ॥

## ರಾಗ ರೇಗುಪ್ತಿ, ಝಂಪೆತಾಳ.

ಇದಕ್ಯಾಕಿಷ್ಟೊಂದು ಚಿಂತೆ ॥ ವೆಂಕಟರಾಯಾ ॥ ಇದಕ್ಯಾ ॥ ಪಲ್ಲ ॥ ಇದಕ್ಯಾಕಿಷ್ಟೊಂದು ನಾ ಪದುಮಾವತಿಯ ತರುವೆ ಪದುಮನಾಭನೆ ತಿಳಿದವರಿಗೆ ಗಂಟಿದೂ ॥ ಅನುಪಲ್ಲ ॥ ಮಾತೀಲೆ ವಲಿಸುವೆನು । ಹಾದಿಯ ತೋರೋ । ಹಾತೊರಿಯಬೇಡೊ ನೀನೂ ॥ ಸೋತು ಕಣ್ಣಿಗೆ ನಿದ್ರೆ ಆತುರಾದರೆ ಏನು । ಕೂತು ಮಲಗಬೇಕು ನೀ ತಿಳಿ ದೇವನೇ ॥ ೧ ॥ ಬರುವೆನೀ ಕಾರ್ಯವ ಮಾಡಿ । ಸುಮ್ಮನೆ ಅನಕಾ । ಇರುತೀರು ಧೈರ್ಯ ಮಾಡೀ ॥ ತ್ವರವಮಾಡೀ ಹಸಿವೆಯ ಭರ ಇದ್ದಕ್ಷಣಕೇನು । ಎರಡು ಕೈಲುಂಬಾರೆ ಪರಮ ಪುರುಷನೆ ॥ ೨ ॥ ಧರೆಯೊಳಿಲ್ಲಿದ್ದರೇನು ನಿನ್ನವ ಳಾಕೆ । ಸರಸದಿ ತಿಳಿಯೊ ನೀನೂ ॥ ಕರಗಿದ ತುಪ್ಪಾವು ಹರಿವಾಣವನು ಬಿಟ್ಟು । ಹರದು ಹೋಗುವದೇನೊ ವರದಾನಂತಾದ್ರೀಶಾ ॥ ೩ ॥

## ವಚನ.

ಇಷ್ಟು ಮಾತಿಗೆ ಹರಿಯು ಥಟ್ಟನೆ ಮಾಯದಲೆ ಧಿಟ್ಟಾದ ಕುದುರೆಯನು ಸೃಷ್ಟಿಯನು ತಾ ಮಾಡಿಕೊಟ್ಟು ನುಡಿದ ನೆಟ್ಟನೆ ಮಾರ್ಗವಿದು ಮೆಟ್ಟಿ ನೀ ನಡಿಯಮ್ಮ ಬೆಟ್ಟವನು ಇಳಿದೂ ॥ ಬೆಟ್ಟದ ಕೆಳಗಿರುವ ಶ್ರೇಷ್ಠ ಕಪಿಲೇಶ್ವರನ ದೃಷ್ಟಿಂದ ಕಾಣುತಲೆ ಥಟ್ಟನೆ ಕೈಮುಗಿದು ಘಟ್ಟಿಮುಟ್ಟಿ ವರ ಬೇಡಮ್ಮ ಬೆಟ್ಟದ ವೆಂಕಟಗೆ ಥಟ್ಟನೆ ಕಲ್ಯಾಣ ಕಟ್ಟಲೆಂದೂ ॥ ೧ ॥ ಮುಂದೆ ಶುಕಮುನಿಯಿದ್ದ ಚಂದದಾಶ್ರಮಕ್ಹೋಗಿ



ವಂದಿಸ್ಯಾತಗೆ ನೀನು ಮುಂದೆ ಕಲ್ಯಾಣ ಬರಲೆಂದು ಬಯಸುವಂಥ ಕಂದ ಗೋವಿಂದ ನಿನಗೊಂದಿಸಿದನೆಂಥೇಳು ಚಂದದಿಂದಾ ॥ ಮುಂದೆ ಪದ್ಮಾಖ್ಯ ಬಹು ಚಂದಾದ ತೀರ್ಥದಲಿ ಸುಂದರರು ಕೃಷ್ಣರಾಮೆಂದು ಎನಿಸುವರಲ್ಲಿ ವಂದಿಸ್ಯವರಿಗೆ ಭಕ್ತಿಯಿಂದ ಪೂಜಿಸು ಕಾರ್ಯ ಚಂದಾಗಿ ಕೈಗೂಡಲೆಂದು ನೀನೂ ॥ ೨ ॥ ಹಾಗೆ ಮುಂದಕೆ ಮತ್ತೆ ಸಾಗಿ ಆಕಾಶ ಪುರಕ್ಹೋಗಿ ಪದ್ಮಾವತಿಯ ಬೇಗ ಘಟನೆಯ ಮಾಡು ಯೋಗ ಬಲ್ಲವಳಿ ಘೆಚ್ಚಾಗಿ ಪೇಳಲಿಯೇನು ಹ್ಯಾಗೆ ಕಾರ್ಯಾದೀತೊ ಹಾಗೆ ಮಾಡು ॥ ನಾಗಶಯನನ ಮಾತು ನಾಗವೇಣಿಯು ಕೇಳಿ ನಾಗಗಿರಿ ಇಳಿದು ಚನ್ನಾಗಿ ನಡೆದಳು ಹರಿಯು ಹ್ಯಾಗೆ ಹೇಳಿದನು ಅವರ್ಹಾಂಗೆ ಮಾಡುತ ಮುಂದೆ ಬೇಗಾಗಸ್ತ್ಯಾಶ್ರಮಕೆ ಸಾಗಿದಳು ತಾನೂ ॥ ೩ ॥ ಮುಂದಗಸ್ತ್ಯೇಶ್ವರನ ಮೋದದಲೆ ಬಲಗೊಂಡು ಐದುಸಂಖ್ಯಾಕ ನತಿಗೈದು ಕುಳ್ಳಿರಲು ಅಲ್ಲೆ ಶ್ರೀಧರನ ಕಾರ್ಯದಲಿ ಸಾಧಕಳು ಆಗೀ ॥ ಬೋಧಿಸೀ ಪರಿಯು ಬಕುಲಾದೇವಿಯನು ಕಳುಹಿ ಹಾದಿ ತೋರಿಸಿದಂಥ ಶ್ರೀದ ಶ್ರೀಮುದನಂತ ಭೂಧರೇಶನ ಪೂರ್ಣದಯದಿ ವಿಘ್ನಗಳೆಲ್ಲ ಕೊಯಿದು ಮುಗಿಯಿತು ಇಲ್ಲಿಗೈದು ಅಧ್ಯಾಯಾ ॥ ೪ ॥

## ಐದನೆಯ ಅಧ್ಯಾಯವು ಸಂಪೂರ್ಣವು.



॥ ಪುಲಿಂದಾರೂಪಧರಾಯ ನಮಃ ॥

# ಕೊರವಂಜೀ ಪದಗಳು.



## ಆರನೆಯ ಅಧ್ಯಾಯವು.

ಅಘಟ್ಯಘಟನಾಪಟ್ವೀ ಪುಲಿಂದಾ ಶ್ರೀಪತೇಸ್ತನುಃ ।
ನೃಪಜಾಸ್ಮರಪೀಡಾಂ ತಾಂ ಕಥಯಂತೀ ಹರೇದಘವ್ ॥

### ರಾಗ ನಾಟಿ, ಝಂಪೆತಾಳ.

ಜಯಜಯಾ॥ ಜಯ ಜಯಪ್ರದವೇಷ। ಜಯ ನಿತ್ಯಸಂತೋಷ॥ ಜಯತು ಜಯ ಲಕ್ಷ್ಮೀಶ । ಜಯ ವೆಂಕಟೇಶಾ ॥ ೧ ॥ ಪದ್ಮಜಾಕೃತ ಯಾತ್ರಾ । ಪದ್ಮವಿಕಸಿತನೇತ್ರಾ ॥ ಪದ್ಮಜಾಸನ ಮುಖ್ಯ । ಪದ್ಮನಾಭಾಖ್ಯಾ ॥ ೨ ॥ ಗುರ್ವನುಗ್ರಹಗಮ್ಯ । ಗುರುಗುಣಾರ್ಣವ ಸೌಮ್ಯ ॥ ಗುರ್ವನಂತಾದ್ರೀಶ । ಗುರುಸುಪ್ರಕಾಶಾ ॥ ೩ ॥

### ವಚನ.

ಸಿರಿಸಹಿತ ಶೇಷಾಖ್ಯಗಿರಿಯಲ್ಲಿ ಇರುವಂಥ ಪರಮಪುರುಷನ ಪಾದಸರಸಿಜಂಗಳ ನಿತ್ಯ ಸ್ಮರಿಸಿ ನತಿಸುವೆ ಮತ್ತೆ ಮರೆಯದಲೆ ಮನದಲ್ಲಿ ಸ್ಮರಿಸಿ ಗುರುಗಳಿಗೆಲ್ಲ ಕರವ ಮುಗಿವೆ ॥ ವರ ಬುದ್ಧಿಯಲಿ ಯೆನ್ನ ಶಿರವೆಟ್ಟೆ ಹಾರುತಲೆ ಇರುವಂಥ ಲೋಕದಲಿ ವರ ಕವೀಶ್ವರರುಗಳಿಗೆ ಕರಮುಗಿದು ಎನ ಬುದ್ಧಿ ಹರಿದಷ್ಟು ಪೇಳುವೆನು ವರ ವೆಂಕಟಾಧೀಶ ಕೊರವಂಜಿ ಕಥೆಯ ॥ ೧ ॥ ಚನ್ನಿಗನು ಘನಮಹಿಮ ಪನ್ನಗಾದ್ರೀಶ ತಾ ಮುನ್ನಾಗಿ ನಾರಿಕುಲರನ್ನ ಬಕುಲಾವತಿಗೆ ಚನ್ನಾಗಿ ಬೋಧಿಸುತ ತನ್ನ ಕಾರ್ಯಕೆ ಕಳುಹಿ ಮುನ್ನ ಆಲೋಚಿಸಿದ ತನ್ನ ಮನದೊಳಗೆ॥



ಎನ್ನ ಕಾರ್ಯಕ್ಕೆ ಅನ್ಯರೂಪವ ಧರಿಸಿ ಇನ್ನು ನಾ ಪೋಗುವೆನು ತನ್ನ ಕಾರ್ಯವು ಮತ್ತೆ ಅನ್ಯರಿಗೆ ಪೇಳಿದರೆ ತನ್ನಾಗೆ ಮನಗೊಟ್ಟು ಮುನ್ನ ಮಾಡುವರಲ್ಲ ಚನ್ನವಾಗೀ ॥ ೨ ॥ ಒಬ್ಬ ಮಗ ಮಗನಲ್ಲ ಒಕ್ಕಣ್ಣು ಕಣ್ಣಲ್ಲ ಉಬ್ಬುಬ್ಬಿ ವನಿತೆಯರು ಕೊಬ್ಬಿಲಾಡಿದ ಮಾತು ಒಬ್ಬರಲಿ ನಿಜವಲ್ಲವೆಂಬ ಈ ರೀತಿ ಅವಲಂಬಿಸುತ ಕೊರವಂಜಿಯೆಂಬೋ ರೂಪವಾದಾ ॥ ಗಂಭೀರ ಕೊರವಿ ಮುಖವೆಂಬುವದು ಬಾಡಿಹದು ಗುಂಭ ಬಾಯ್ವಳಗ್ಹಲ್ಲುವೆಂಬುವದು ಒಂದಿಲ್ಲ ಲಂಬಕರ್ಣಗಳಿಹವು ಲಂಬ ಕುಚಗಳು ಮತ್ತೆ ಲಂಬೋದರೀಯೆನಿಸಿಕೊಂಬುವಳು ತಾನೂ ॥ ೩ ॥ ಚೀರವಸ್ತ್ರವನುಟ್ಟು ಛಿದ್ರಕುಪ್ಪುಸ ತೊಟ್ಟು ಘೋರಜಡೆಗಳ ಧರಿಸಿ ಧೀರ ಕಮಲೋದ್ಭವನ ಆರೊಂದು ತಿಂಗಳದ ಚೀರ ಶಿಶುವಿನ ಮಾಡಿ ಸಾರ ಬ್ರಹ್ಮಾಂಡವೆ ಘೋರ ಬುಟ್ಟಿಯ ಮಾಡಿ ಚಾರು ನವಧಾನ್ಯಗಳ ಪೂರ ತುಂಬಿದಳೂ ॥ ಚಾರು ಫಣೆಯಲ್ಲಿ ಕಸ್ತೂರಿತಿಲಕವನಿಟ್ಟು ಹಾರ ಪದಕವ ಧರಿಸಿ ಘೋರ ಮೂಗುತಿನಿಟ್ಟು ಗೀರು ಕಂಕಣ ಕೈಗೆ ಚಾರು ಬಿರದಾವಳಿಯು ತೋರುತಲೆ ಕಟ್ಟಿದಳು ನಾರಿ ತಾ ಐವತ್ತುಪೂರ ವಯದವಳಾಗಿ ತೋರುತಿಹಳೂ ॥ ೪ ॥ ಜೋಲಗಿವಿಯಲಿ ತಕ್ಕ ವಾಲೆಯನು ಇಟ್ಟು ಮಣಿಮಾಲೆಗಳ ಧರಿಸಿದಳು ಮೂಲದಲಿ ಶಂಖಮಣಿ ಮೇಲೆ ಗುಲುಗುಂಜಿಮಣಿ ಮೇಲಾದ ತುಲಸಿಮಣಿ ಮೇಲೆ ಶ್ರೀಗಂಧಮಣಿ ಮೇಲೆ ಕರ್ಪೂರಮಣಿ ಮೆಲ್ಲಗ್ಹಾಕಿದಳೂ ॥ ಮೇಲೆ ಸ್ಫಟಿಕದಮಣಿಯು ಮೇಲೆ ಕಮಲಾಕ್ಷಮಣಿ ಜೋಲೆ ಮೊಲೆಗಳ ಮೇಲೆ ಸಾಲ್ಹಿಡಿದು ವಿವಿಧ ಮಣಿಮಾಲೆಗಳು ತಾ ಧರಿಸಿ ಬಾಲೆ ಕಟ್ಟಿದಳು ತನ್ನ ಬಾಲಕನ ಉಡಿಯಲ್ಲಿ ಕೋಲು ಕೈಯಲಿ ಪಿಡಿದು ನಡದಳಾಗಾ ॥ ೫ ॥

### ಶ್ರೀರಾಗ, ಆದಿತಾಳ.

ಗಿರಿಯಿಂದ ನಾರಾಯಣಪುರಕೆ ಬಂದಳು । ಪುರಬಾಗಿಲಗಳನೆಲ್ಲ ತ್ವರದಿ ದಾಟಿದಳೂ ॥ ತಿರುವಿದ ಶರಗು ತಿರುತಿರುಗಿ ಹೋದವು ತಲೆ । ತಿರುಗಾಡುತ ಬಂದಳು ತಿರುಕೊಂಬುವರಂತೇ ॥ ೧ ॥ ಮನೆಮನೆ

ಬಾಗಿಲನು ಮೆಟ್ಟುತಿಹಳು । ಮನಸಿಗೆ ಬಂಥಾಗೆ ಧ್ವನಿಮಾಡುತಿ
ಹಳೂ ॥ ಮನಗೊಟ್ಟು ಕೇಳಿರಿ ಎನ್ನ ತಾಯಿಗಳಿರಾ । ಮನದ ಮಾತು
ಗಳ್ಹೇಳುವೆ ಮನೆಯವ್ವಗಳಿರಾ ॥ ೨ ॥ ಹಿಂದಾದದು ಹೇಳೇನು ಇಂದಾ
ದದು ಮತ್ತೆ । ಚಂದಾಗಿ ಪೇಳೇನು ಮುಂದಾಗುವದೆಲ್ಲಾ ॥ ಹಿಂದಕ್ಕೆ
ನಾ ಬಹಳ ಮಂದಿಗ್ಹೇಳಿದೆನು । ಒಂದೂ ಸುಳ್ಳಾಗಿಲ್ಲ ಸಂದೇಹವಿಲ್ಲಾ ॥
॥ ೩ ॥ ಸಾಮುಭೇದವು ಬಲ್ಲೆ ಸಾಮುದ್ರಿಕೆ ಬಲ್ಲೆ। ಹೈಮಾದಿಜ್ವರಕೌಷಧ
ನಾ ಮಾಡಲು ಬಲ್ಲೆ ॥ ಕಾಮಿನಿಯರಿಗಾದ ಕಾಮಜ್ವರ ಬಲ್ಲೆ। ಕೌಮಾ
ರಿಗಳಿಗಂತು ನಾ ಮುಂಚೆ ಬಲ್ಲೇ ॥ ೪ ॥ ಭೂತ ಬಿಡಿಸಲು ಬಲ್ಲೆ ಬೇತಾ
ಳವು ಬಲ್ಲೆ। ಮಾತಾಡದ ಮೂಕರನ ಮಾತಾಡಿಸಬಲ್ಲೇ ॥ ನೀತಿನುಡಿ
ಗಳ ಬಲ್ಲೆ ಜ್ಯೋತಿಷ್ಯವ ಬಲ್ಲೆ । ಕೂತು ಕೇಳಿದರೆಲ್ಲ ಮಾತ್ಹೇಳಲು
ಬಲ್ಲೇ ॥ ೫ ॥ ಹಸನಾಗಿ ಪೇಳುವೆ ಕುಶಲಾದ ವಾಣೀ। ಹುಸಿಯಲ್ಲವಿದು
ಯೆನ್ನ ಹಸುಗೂಸಿನಾಣೆ ॥ ಅಸು ಹೋದರು ನಾನಲ್ಲ ಹುಸಿಯಾಡುವ
ಕೊರವೀ । ವಸುಧೆಯೊಳಗೆ ನಾನೂ ಹೆಸರಾದ ಕೊರವೀ ॥ ೬ ॥ ನರ
ನಾರಾಯಣರಲ್ಲೆ ಇರುವಂಥಾ ಕೊರವೀ । ವರದನಂತಾದ್ರೀಶನ ವರ
ವುಳ್ಳ ಕೊರವೀ ॥ ಕೊರವೀಮಾತನು ಕೇಳಿ ಪುರದ ನಾರಿಯರು । ಅರ
ಸಿನ ರಾಣೀಗೆ ತ್ವರದಿ ಪೇಳಿದರೂ ॥ ೭ ॥

## ರಾಗ ಪೂರ್ವಿ, ಬಿಲಂದಿತಾಳ.

ಕೊರವಿ ಬಂದಳಮ್ಮ ಇಲ್ಲಿಗೆ। ಈ ಕೇರಿಗೆ ॥ ಕೊ ॥ ಕೊರವಿ
ಬಂದಳಮ್ಮ ಇಲ್ಲೆ ಖರೆಯ ಮಾತ ಪೇಳುತಿಹಳು ॥ ಪುರದ ಜನರು
ನೆರೆದು ಬಹಳ ಆದರಬಟ್ಟು ಕೇಳುತಿಹರು ॥ ಪಲ್ಲ ॥ ಹೃದಯಭಾವ
ಬಲ್ಲವಳು । ಮಧುರಮಾತನಾಡುತಿಹಳು ॥ ಮುದದಿ ಕೇಳಿದ್ಧೇಳುವಳು ।
ಮುದುಕಿಯಾಗಿ ತೋರುತಿಹಳು ॥ ೧ ॥ ಚಿಕ್ಕ ಹೆಣ್ಣುಮಕ್ಕಳೀಗೆ ।
ತಕ್ಕ ವರರ ಹೇಳುತಿಹಳು ॥ ಮಕ್ಕಳ ಹೇಳುವಳು ತನ್ನ । ಮಕ್ಕಳಾಣೆ
ಕೊಡುತಿಹಳೂ ॥ ೨ ॥ ನರನಾರಾಯಣರು ಎಲ್ಲಿ । ಇರುವರಲ್ಲೆ ಇರುವ
ಳಂತೆ ॥ ವರದನಂತಾದ್ರೀಶ ಕೊಟ್ಟ । ವರವುಳ್ಳ ಕೊರವಿಯಂತೆ ॥ ೩ ॥





## ರಾಗ ಕನಡಕಾಂಬೋಧಿ, ಅಟತಾಳ.

ಕೊರವೀ ಬಂದದ್ದು ಕೇಳಿ ಕರಿಯಿರೆಂದಳು ಬೇಗ ॥ ಅರಸಿನ
ಪಟ್ಟದರಾಣೀ ಪನ್ನಗವೇಣೀ ॥ ೧ ॥ ಅರಸಿ ಮಾತನು ಕೇಳಿ ಅರಸಂಚ
ಗಮನೇರೂ ॥ ತಿರುಗಿ ಬಂದರು ಮತ್ತಲ್ಲೆ ಕೊರವಿ ಇದ್ದಲ್ಲೆ ॥ ೨ ॥
ಕೊರವೀ ಬಾರಮ್ಮಾ ನಿನ್ನ ಕರದರಸಿಯು ಯೆಂದು ॥ ಕರದಾರು
ಕೈಯಾ ಬೀಸುತ ಕಣ್ಣು ತೆರವುತಾ ॥ ೩ ॥ ಕುಡತಿಕಂಗಳೀರ ನುಡಿ
ಕೇಳಿ ಕೊರವಂಜೀ ॥ ನುಡಿದಾಳೀ ಪರಿಯು ವಾಣೀ ಮಾತಿನ ಜಾಣೀ ॥
॥ ೪ ॥ ಆಕೆ ಕರದಾಳು ಎನ್ನ ಲೋಕನಾಥನ ರಾಣಿ ॥ ಆಕೆ ಸೌಭಾಗ್ಯದ
ವಡವೀ ಹುಟ್ಟು ನಾ ಬಡವೀ ॥ ೫ ॥ ಎನ್ನ ವಸ್ತ್ರವು ನೋಡೀ ಎನ್ನ
ಕುಪ್ಪುಸ ನೋಡೀ ॥ ಎನ್ನ ಒಡವೇಯು ನೋಡಿರಿ ಮಾತನಾಡಿರೀ ॥
॥ ೬ ॥ ಅನ್ನಹೀನಳು ನಾನು ಘನ್ನ ರಾಜನ ರಾಣೀ ॥ ಎನ್ನ ಕರದಾ
ಳೆಂಬುವದು ಅಪಹಾಸ್ಯವಿದೂ ॥ ೭ ॥ ಚಿಕ್ಕಪ್ರಾಯದವರೆ ಚಕ್ಕಂದಾವೆ
ನಿಮಗಿದು ॥ ನಕ್ಕುಮಾಡುವೀರ್ಯಾ ಬಂಡು ಮುದುಕಿಯು ಕಂಡೂ ॥
॥ ೮ ॥ ಕಂಜಮುಖಿಯರು ಕೊರವಂಜಿಮಾತನು ಕೇಳೀ ॥ ಅಂಜಿ
ಮಾತಾಡಿದರಾಗ ವಿನಯದಿ ಬೇಗ ॥ ೯ ॥ ಧರ್ಮದೇವಿ ನಿನ್ನ ಮುಂದೆ
ಸುಮ್ಮನೆ ಸುಳ್ಳಾಡಲು ॥ ಒಮ್ಮೆಗಾದರು ದಕ್ಕೀತೆ ಆಡೋದು ರೀತ್ಯೇ ॥
॥ ೧೦ ॥ ಅಂದ ಮಾತನು ಕೇಳಿ ಮಂದಹಾಸದಿ ನಕ್ಕು । ಬಂದೆ ನಡಿ
ರೆಂದಾಳು ಮುಂದೆ ಆನಂದದಿಂದ ॥ ೧೧ ॥ ಹರಿನಾರಾಯಣೀ ಯೆಂಬೊ
ಕೊರವಿ ನಡದಳಲ್ಲಿಗೆ ॥ ಅರಮನೆ ಬಾಗಿಲೊಳಗೆ ಅಂಗಳದೊಳಗೆ ॥ ೧೨ ॥
ಮೇಳಸ್ವರದಿಂದಾನಂತಶೈಲೇಶನ ಕೊಂಡಾಡಿ ॥ ಕೋಲು ಕೋಲೆಂದು
ಪಾಡುವಳು ಮಾಯಾ ತೋರುವಳೂ ॥ ೧೩ ॥

## ರಾಗ ಶಂಕರಾಭರಣ, ಆದಿತಾಳ.

ಕೋಲು ಕೋಲೆನ್ನ ಕೋಲು । ಮುತ್ತಿನ। ಕೋಲು ಕೋಲೆನ್ನ
ಕೋಲು ॥ ಕೋಲನಾಡುವ ಬನ್ನಿ । ಬಾಲವೆಂಕಟಪತಿ । ಲೀಲೆಕೊಂ
ಡಾಡುತಲೇ ॥ ಪಲ್ಲ ॥ ಪರಮ ದಯಾಳು ಹರೀ । ಭೃಗುಮುನಿ । ಭರ

ದಿಂದೊದವುತಿರೇ ॥ ತಿರುಗಿ ಕಾಲ್ಪಿಡಕೊಂಡು । ಪರಿಪರಿ ಸ್ತುತಿಸಿದಾ ॥
॥ ೧ ॥ ಪರಮಚಂಚಲ ಲಕ್ಷ್ಮೀ । ತಾ ಶ್ರೀ । ಹರಿನಡತೆಯ ನೋಡೀ ॥
ಧರಿಸದೆ ಕೊಲ್ಲಾ । ಪುರಕೆ ನಡೆದಾಳೂ ॥ ೨ ॥ ಸಿರಿ ಇಲ್ಲದೆ ನಾನೂ ।
ಒಬ್ಬನೆ । ಇರಲಾರೆನು ಎಂದು ॥ ಹರಿ ವೈಕುಂಠದಿ । ಧರೆಗಿಳಿದಾನೂ ॥
॥ ೩ ॥ ಉತ್ತುಮ ವೈಕುಂಠಾ । ಇರಲು । ಮತ್ತುರಗಾದ್ರಿಯಲಿ ॥
ಹುತ್ತು ಮನೆಯ ಮಾಡಿ । ಗುಪ್ತದಲಿರುತಿಹಾ ॥ ೪ ॥ ನಿತ್ಯ ನಿರ್ವಿ
ಕಾರಾ । ಶ್ರೀಹರಿ । ಭಕ್ತರ ಅಭಿಮಾನೀ ॥ ನೆತ್ತಿಯ ಒಡಕೊಂಡು ।
ಭಕ್ತನ ಸಲಹಿದಾ ॥ ೫ ॥ ಭವರೋಗದ ವೈದ್ಯಾ । ತಾ ಯೆನಿ । ಸುವನು
ಗುರುವ ಕರದಾ ॥ ಅವನಿಂದಲ್ಲೆ ಘಾ । ಯುವ ಕಳದಾನೂ ॥ ೬ ॥
ಭೂಮಿರಮಣ ವರಹಾ । ದೇವನ । ಭೂಮಿಯ ತಾ ಬೇಡೀ ॥ ಸ್ವಾಮಿ
ಪುಷ್ಕರಣೀ । ಸೀಮೆ ಸಾಧಿಸಿದ ॥ ೭ ॥ ನೋಟದಿಂದ ಚೆಲುವಾ । ತಾ
ಬಹು । ಮಾಟಕುದುರೆ ಏರೀ ॥ ಥಾಟನಿಂದ ಮೃಗ । ಬೇಟೆಗೆ ನಡ
ದನೂ ॥ ೮ ॥ ವನವನ ಸಂಚರಿಸೀ । ಅಲ್ಲೊ । ಬ್ವನಿತೆಯಳನು ಕಂಡಾ ॥
ಮನಸಿಟ್ಟನು ಆ । ವನಿತೆಯ ಮೇಲೇ ॥ ೯ ॥ ಆ ವನಿತೆಯು ಕನ್ಯಾ ।
ತಾ ಪ । ದ್ಮಾವತಿಯೆನಿಸುವಳೂ ॥ ಹೂವಿಗೆ ಬಂದ । ಳಾ ವನದಲ್ಲಿ ॥
॥ ೧೦ ॥ ವಾರಿಗೆ ಗೆಳತಿಯರಾ । ಕೂಡಿ ವಿ । ಹಾರಮಾಡುತಿಹಳೂ ॥
ಸಾರೇಕ ನಡದನು । ಶ್ರೀರಮಣನು ತಾ ॥ ೧೧ ॥ ನಾಡೊಳಗಿನ ರೀತಿ ।
ಎಲ್ಲರು । ಆಡುವಂಥ ಮಾತು ॥ ಆಡಿದ ಕಲ್ಲೀ । ಡ್ಯಾಡಿದಳಾಕೇ ॥ ೧೨ ॥
ಪೆಟ್ಟು ತಾಗಿ ಕುದುರೆ । ಪ್ರಾಣವು । ಬಿಟ್ಟಿತು ಆಗಲ್ಲೇ ॥ ಬಿಟ್ಟಾ ಕುದು
ರೆಯ । ಬೆಟ್ಟವನೇರಿದಾ ॥ ೧೩ ॥ ಆ ಮಾನಿನಿ ಅವಗೆ । ಮೋಹಿಸಿ । ತಾ
ಮಾತಾಡದಲೇ ॥ ಕಾಮಜ್ವರದಿಂ । ತಾ ಮಲಗಿಹಳು ॥ ೧೪ ॥ ಪ್ರಾಂತ
ಕನಂತಾದ್ರೀ । ಯಲ್ಲಿಹ । ಶಾಂತಮೂರುತಿ ಹೊತ್ತು ॥ ಅಂತರಂಗ
ಜ್ವರ । ಶಾಂತವಾಗದು ॥ ಕೋಲು ಕೋಲೆನ್ನ ಕೋಲು ॥ ೧೫ ॥

### ವಚನ.

ಕೊರವಿಧ್ವನಿ ಕೇಳುತಲೆ ಅರಸನಾ ಪುತ್ರಿ ತಾ ಸ್ಮರಣೆಯಿಂದಲೆ ಎದ್ದು ಪರಮ ಚಂಚಲಳಾಗಿ ಹೊರಗೆ ಬಂದಳು ಅಲ್ಲೆ ಕೊರವಿಯನು



ಕಂಡು ಹೊಸಕೊರವಿ ಇವಳ್ಯಾರೆಂದು ಬೆರಗಾದಳಾಗ ॥ ಅರಸಿ ಮಗಳನು ಕಂಡು ಹರುಷದಲೆ ಬಿಗಿದಪ್ಪಿ ಕೊರವಿ ಕಾಲ್ಗುಣದಿಂದ ಹೊರಗೆ ನೀ ಬಂದ್ಯವ್ವಾ ಸರಸವಾಯಿತು ಯೆಂದು ಇರಿಸಿ ತನ್ನ ತೊಡೆ ಮ್ಯಾಲೆ ಕೊರವಿಯನು ಮುಂದಕ್ಕೆ ಕರದಳಾಗ ॥ ೧ ॥ ಕೊರವಿ ನೀ ಬಾರವ್ವಾ ವರ ಧರ್ಮದೇವತೆಯೆ ಸರಿ ಉಂಟು ನಿನ್ನಿಂದ ಪರಮ ಲಾಭಿವಳಿಗೆ ಜ್ವರತಾಪವಾದದ್ದು ಪರಿ ಕೇಳಬೇಕೆಂದು ಕರಿಯ ಕಳುಹಿದೆ ನಿನ್ನ ತ್ವರದಿಂದ ನಾ ಇಲ್ಲೆ ಪರಮ ಆಸನದ ಮ್ಯಾಲೆ ಸರಸಾಗಿ ಕೂಡೆ ॥ ಜ್ವರತಾಪದಿಂದೀಕೆ ಹೊರಳಾಡುವದು ಕಂಡು ಮರುಗುತಲೆ ನಿನ್ನನ್ನು ತ್ವರದಿಂದ ವದರಿವರೆ ತೆರೆಯಲಿಲ್ಲವು ಕಣ್ಣು ಹೊರಡಲಿಲ್ಲವು ಮಾತು ಸ್ಮರಣೆಲ್ಲ ಮೈಮೇಲೆ ಕೊರವಿ ನಿನ್ನ ಧ್ವನಿ ಕೇಳಿ ಹೊರಗೆ ಬಂದಳು ಹ್ಯಾಗೆ ಪರಮ ಆಶ್ಚರ್ಯವಿದು ಸರಸಾಗಿ ಪೇಳೆ ॥ ೨ ॥ ಮಾನಿತಾಸನದಲ್ಲಿ ಮಾನಿತಳು ಕೊರವಿ ಸನ್ಮಾನದಿಂದಲೆ ಕುಳಿತು ತಾನು ಮಾತಾಡಿದಳು ನೀನು ಕೇಳುವದೆಲ್ಲ ನಾನು ಪೇಳುವೆ ರಾಜಮಾನಿನಿಯೆ ನೀ ಯೆನಗೆ ಏನು ಕೊಡುವೀ ॥ ಏನು ನಾ ಕೊಡಲೆಂದು ನೀನು ಧ್ಯಾನಿಸಬೇಡ ಖೂನ ಪೇಳುವೆ ನಿನಗೆ ಜಾನಕಿಯು ಪೂರ್ವದಲ್ಲಿ ಜಾಣೆ ಆ ಕೌಸಲ್ಯೆ ಮಾನದಲಿ ರುಗ್ಮಿಣಿಯು ದಾನಶೂರಳು ಸತ್ಯಭಾಮಿನಿಯು ಅವರೆಲ್ಲ ಏನು ಕೊಟ್ಟಿದ್ದು ಕೊಡು ನೀನು ಅದಕಿಂತ ಹೆಚ್ಚೇನು ಕೊಡಬೇಡವಮ್ಮಾ ॥ ೩ ॥ ಬರೆಮಾತನು ಕೇಳಿ ತಿರುಗಿ ಇನ್ನೊಮ್ಮೆ ಬಾ ಕೊರವಿಯೆಂದರೆ ಮತ್ತೆ ಬರುವವಳು ನಾನಲ್ಲ ಅರಸಿ ಬೇಗನೆ ಮುಂಚೆ ತರಿಸಿ ಮುಂದಿಡು ನೀನು ವರ ಸುವರ್ಣದ ಮೂರು ಮೊರ ತುಂಬ ಮುತ್ತುಗಳು ಕರಮುಗಿದು ಆ ಮೇಲೆ ಸರಸಾಗಿ ಕೇಳೆ ॥ ಕೊರವಿಮಾತಿಗೆ ಮತ್ತೆ ತಿರುಗಿ ಮಾತಾಡದಲೆ ಅರಸಿ ತಾ ಆಕ್ಷಣಕೆ ತರಿಸಿ ಇಟ್ಟಳು ಮುಂದೆ ವರ ಸುವರ್ಣದ ಮೂರು ಮೊರತುಂಬ ಮುತ್ತುಗಳು ಅರಸಿ ಕೊಟ್ಟಿದ್ದು ನೋಡಿ ಹರುಷದಲಿ ಹರಿಯೆಂಬೊ ಕೊರವಿ ನುಡಿದಳು ನಾಡಕೊರವಿಯಂತೆ ॥ ೪ ॥ ಧನ್ಯಧನ್ಯಳು ಲೋಕಮಾನ್ಯಳರಸಿಯೆ ನೀನು ನಿನ್ನ ಸರಿ ಸೌಭಾಗ್ಯ ಇನ್ನೊಬ್ಬರಲಿ ಕಾಣೆ ನಿನ್ನ ಪುಣ್ಯವು ಬಹಳ ಚೆನ್ನಾಗಿ

ಸಂಪತ್ತು ಮುನ್ನ ಸಂತಾನ ಸಂಪನ್ನಳಾಗಿರುವೀ ॥ ಇನ್ನು ಮುಂದಕ್ಕೆ ನಿನಗೆ ಉನ್ನತೈಶ್ವರ್ಯ ತಿಳಿ ನಿನ್ನ ಮನಸಿನ ಮಾತು ಚನ್ನಾಗಿ ಪೇಳೇನು ಪುಣ್ಯವಂತೆಯೆ ಹೊಟ್ಟೆ ತಣ್ಣಗಾಗಲಿ ಇಂದು ಎನ್ನ ಕೂಸಿಗೆ ತುತ್ತನ್ನ ನೀಡೇ ॥ ೫ ॥ ಬೇಡಿದಾ ಕ್ಷಣಕೆ ತ್ವರಮಾಡಿ ಹರಿವಾಣದಲಿ ನೀಢಿದಳು ಕ್ಷೀರಾನ್ನ ನೋಡಿ ಕೊರವಿಯು ತುತ್ತುಮಾಡಿ ಉಣಿಸಲು ಥೂಥೂ ಮಾಡಿ ಉಗುಳಿತು ಕೂಸು ನೋಡಿ ಮತ್ತ್ಯಾನ್ನವನು ಬೇಡಲಿಲ್ಲ ॥ ನೋಡಿ ಶಿಶುವಿನ ಶಿಟ್ಟುಮಾಡಿ ಬಡಿಯುತ ನಿಂದೆಮಾಡಿ ಬೈದಳು ಆಗ ಖೋಡಿ ಯೆಲೋ ನಿರ್ಭಾಗ್ಯ ನಾಡೊಳಗೆ ತಿರುಕೊಂಡು ಬೇಡಿ ನೀ ಉಂಬುವದು ರೂಢಿಯಲಿ ನಿನಗುಚಿತ ಬೇಡವಿದು ರಾಜಾನ್ನ ಬೇಡಿ ಬಂದಿಲ್ಲಾ ॥ ೬ ॥ ತಾಡನದಿ ಬಹಳ ಚೀರಾಡಿ ಅಳುವದು ಶಿಶು ನೋಡಿ ಧರಣಿಯು ತಾನು ಕೂಸಿನ ಬಡಿಯಬೇಡೆನಲು ಕೊರವಿ ಮಾತಾಡಿ ದಳು ಹೀಗೆಂದು ನೋಡಮ್ಮ ಇದು ಎನ್ನ ಕಾಡುತದೆ ಹಗಲೆಲ್ಲ ಮಾಡ ಲಿನ್ನೇನೂ ॥ ಖೋಡಿ ಉಣಲಿಲ್ಲ ದಯಮಾಡಿ ನೀ ಕೊಟ್ಟನ್ನ ಆಧ್ಯರಸಿ ನಾ ಉಂಬೆ ಕೇಡೇನು ಮೊಲೆಹಾಲ ಕುಡಿವುದು ತಾ ಎಂದು ಆಡಿ ಮಾತನ ಭಿಡಿಯ ಮಾಡದಲೆ ಮತ್ತಿಷ್ಟು ಬೇಡಿ ಬೇಕಾದ್ದು ಕೊಂಡಾಡಿ ಸೌಖ್ಯದಲಿ ತಾ ಉಂಡು ತೇಗಿದಳೂ ॥ ೭ ॥ ತೃಪ್ತಳಾದಳು ಕೊರವಿ ನಿತ್ಯತೃಪ್ತಳು ಸ್ವಸ್ಥಚಿತ್ತದಿಂದಲಿ ಕುಳಿತು ಅತ್ತ ಕೂಸಿನ ತೊಳೆದು ಮುತ್ತು ನೀ ಬಾ ಎಂದು ಅತ್ಯಂತ ಪ್ರೇಮದಲಿ ಎತ್ತಿ ಮುದ್ದಾಡಿದಳು ಮತ್ತೆ ತೊಡೆಮ್ಯಾಲೇರಿಸಿ ಹುತ್ತಿನಲಿ ಮಾಡಿದ್ದ ಅತ್ಯಂತ ಉಪಕಾರ ಪೊತ್ತು ತೀರಿಸಿದಳಾಹೊತ್ತು ಮರೆಯದಲೇ ॥ ಮತ್ತೆ ಮುಂದಕೆ ತಾನು ಬೆತ್ತ ಕೈಯಲಿ ಪಿಡಿದು ಎತ್ತಿ ಮ್ಯಾಲಕ್ಕೆ ಸರ್ವೋತ್ತಮನೆ ಮೊದಲಾದ ಸತ್ಯದೇವತೆಗಳನೆ ಚಿತ್ತದಲಿ ನೆನೆಯುತಲೆ ಒತ್ತಿ ಒದರಿದಳಾಗ ಭಕ್ತಿ ತೋರಿಸುತಾ ॥ ೮ ॥ ಶ್ರೀದ ಶ್ರೀರಮಣ ಭೋ ಆದಿನಾರಾಯಣ ಆದಿ ಯಲಿ ನಾ ನಿನ್ನ ಆದರದಿ ನೆನೆವೆ ಬ್ರಹ್ಮಾದಿದೇವತೆಗಳಿರಾ ಸಾಧು ನುಡಿಗಳ ನಾನು ಸಾಧಿಸಿ ಹೇಳುವೆ ನಿಮ್ಮ ಸಾಧುಕೃಪೆಯಿಂದಾ ॥ ಲೋಕದಲಿ ವಿಖ್ಯಾತ ಶ್ರೀಕಾಶಿವಿಶ್ವೇಶ ಗೋಕರ್ಣಪುರನಿಲಯ ಶ್ರೀ



ಕುಂಭಘೋಣೇಶ ಶ್ರೀಕುಮಾರಸ್ವಾಮಿ ಶ್ರೀಕಾಂತ ದಯಮಾಡು ವೈ ಕುಂಠಪುರದೊಡೆಯ ಶ್ರೀವೆಂಕಟೇಶಾ ॥ ೯ ॥ ಮಂಗಳಪ್ರದ ಪಾಂಡು ರಂಗ ಶ್ರೀವಿರೂಪಾಕ್ಷಲಿಂಗ ಶ್ರೀಶೈಲೇಶ ಗಂಗೆ ಗೋದಾವರೀ ತುಂಗಭ ದ್ರೆಯೆ ಮತ್ತೆ ಮಂಗಳಪ್ರದ ಸತ್ತರಂಗಗಳುಳ್ಳ ತೀರ್ಥಂಗಳಿರಾ ನಿಮ್ಮನ ಹಿಂಗದಲೆ ನಾ ಅಂತರಂಗದಲಿ ನೆನೆವೇ ॥ ಕಾವೇರಿಯಲ್ಲಿರುವ ಕರು ಣಾಬ್ಧಿ ಶ್ರೀರಂಗ ಕಾಶಿಪುರನಿಲಯ ಕಾಳಭೈರವ ಮಹಾಕಾಳಿ ನಾ ನಿನ್ನ ಈ ಕಾಲದಲಿ ನೆನೆವೆ ಭೋ ಕಡು ವೀರಭದ್ರ ಮೂಕಾಂಬಿಕೆಯೆ ದಯ ಮಾಡು ಕಂಚಿಯಲಿ ಕಾಮಾಕ್ಷಿ ಮಧುರೆಯಲಿ ಮೀನಾಕ್ಷಿ ಕಾಶಿಯ ವಿಶಾಲಾಕ್ಷಿ ಕಾಯಿರೆಲ್ಲರು ಕೂಡಿ ಕರುಣದಿಂದಾ ॥ ೧೦ ॥ ಬಹು ಸತ್ಯ ವುಳ್ಳಂಥ ಬಹು ದೇವತೆಗಳಿರಾ ಬಲಗೊಂಬೆ ನಾ ನಿಮ್ಮ ಬಲವಿರಲಿ ಎನ್ನ ಮೇಲೆ ಹಲವು ದೇವತೆಗಳಿಗೆ ಬಹು ಹೆಚ್ಚಿನವಳೆ ಚಂಚಲಳಾಗಿ ನೀ ಪೋಗಿ ಚೆಲುವ ಕೊಲ್ಲಾಪುರದ ಒಳಗಿದ್ದು ಭಕ್ತರಿಗೆ ಒಲಿವಂಥ ಮಹಾಮಾಯೆ ಒಲಿ ನೀನು ಎನ್ನ ಮೇಲೆ ವಚನ ಪೇಳುವೆ ನಿನ್ನ ಒಲುಮೆಯಿಂದಾ ॥ ಅರಸಿ ನೀ ಕೇಳಮ್ಮ ಸರಸಾಗಿ ಪೇಳುವೆನು ತರಿಸು ತಾಂಬೂಲವನು ಸರಸಾದ ಕಾಯಿ ಪತ್ರೆ ಕರ್ಪೂರದಡಿಕೆಗಳು ಕಿರಿ ಗಾಂಚು ಏಲಕ್ಕಿ ವರಮೌಕ್ತಿಕದ ಸುಣ್ಣ ಮರಿಬೇಡೆಂದು ॥ ೧೧ ॥ ಕೊರವಿವಚನವ ಕೇಳಿ ಕಿರಿನಗೆಯ ನಗುವುತಲೆ ತಿರುತಿರುಗಿ ಬೇಡು ವದು ಕೊರವಿಯರ ನಡತೆ ಇದು ಸರಿಯೆಂದು ಅರಸಿ ತಾ ಸರಸಾಗಿ ಎಲ್ಲನು ತರಿಸಿ ಮುಂದಿಟ್ಟು ಈ ಪರಿ ನುಡಿದಳಾಗಾ ॥ ೧೨ ॥

## ರಾಗ ದೇಶೀ, ಅಟತಾಳ.

ಸತ್ಯ ಪೇಳಮ್ಮ ನೀ ಉತ್ತುಮ ಕೊರವಂಜೀ । ಸತ್ಯ ಪೇಳೇ ॥ ಚಿತ್ತಕ್ಕೆ ಬೇಕಾದ್ದು ಮತ್ತೆ ನಾ ಕೊಡುವೆನು । ಸತ್ಯ ಪೇಳೇ ॥ ಪಲ್ಲ ॥ ತರಿಸಿಟ್ಟೆ ನಾ ಮೂರು ಮೊರತುಂಬ ಮುತ್ತನು । ಸತ್ಯ ಪೇಳೇ ॥ ಸರ ಸಾಗಿ ಮನಸಿಗೆ ಹರುಷವಾಗೋ ಹಾಂಗೇ । ಸತ್ಯ ಪೇಳೇ ॥ ೧ ॥ ಗಂಟಲ ಬಿಗಿದು ನೂರೆಂಟು ಮಾತಾಡದೆ । ಸತ್ಯ ಪೇಳೇ ॥ ಬಂಟತನವ ಪೇಳಿ

ಘಂಟಿಸಬೇಡೆನ್ನ । ಸತ್ಯ ಪೇಳೇ ॥ ೨ ॥ ಮಾನವಂತೆಯೆ ಅನುಮಾನ ಮಾಡಲು ಬೇಡಾ । ಸತ್ಯ ಪೇಳೇ ॥ ಅನಂತಾದ್ರೀಶನ ಆಣೆ ನಿನಗೆ ಉಂಟು । ಸತ್ಯ ಪೇಳೇ ॥ ೩ ॥

## ವಚನ.

ಮನ್ನಿಸ್ಯರಸಿಯು ಮಾತು ಮುನ್ನ ನುಡಿದಳು ಕೊರವಿ ಯನ್ನವ್ವ ನೀ ಕೇಳೆ ನಿನ್ನನ್ನ ನಾ ಉಂಡು ನಿನ್ನೊಳು ವಂಚನೆಯ ಇನ್ನ ನಾ ಮಾಡಿದರೆ ಅನ್ನ ಹುಟ್ಟದು ಎನಗೆ ಅನ್ಯಾಯದಿಂದಾ ॥ ಎನ್ನ ಬುಟ್ಟಿಯೊಳಿರುವ ಧಾನ್ಯದೇವತೆ ಆಣೆ ಎನ್ನ ತಾಯಿಯ ಆಣೆ ಎನ್ನ ತಂದೆಯ ಆಣೆ ಚನ್ನಬದರಿಯೊಳಿರುವ ಎನ್ನ ಒಡೆಯನ ಆಣೆ ಎನ್ನ ಗುರುವಿನ ಆಣೆ ಎನ್ನಾಣೆ ತಿಳಿ ಮತ್ತೆ ಎನ್ನ ಕೂಸಿನ ಆಣೆ ಮುನ್ನ ನೀ ಬೇಡಿದ್ದು ಇನ್ನ ಆಣೆಯ ಕೊಡುವೆ ಎನ್ನ ವಚನವು ಸತ್ಯ ಚನ್ನಾಗಿ ತಿಳಿಯೆ ॥ ॥ ೧ ॥ ಅರಸಿ ನೀ ಕೇಳುವ ದುಃಖ ಈ ಮೂರು ಮಾತುಗಳು ವರಪುತ್ರಿಗಾಗಿರುವ ಜ್ವರದ ಕಾರಣ ಒಂದು ಕೊರವಿಯಾ ಧ್ವನಿ ಕೇಳಿ ಹೊರಗೆ ಬಂದು ಮತ್ತೆ ಪರಮ ಉತ್ತಮನಾದ ವರ ಹ್ಯಾಗೆ ಈಕೆಗೆ ದೊರಕುವನು ಎಂದು ॥ ಸರಸಿಜಾಕ್ಷಿಯೆ ಕೇಳು ಜ್ವರದ ಕಾರಣ ನೀನು ಸರಿಗೆಳತಿಯರ ಕೂಡಿ ಸರಸಾಗಿ ವನದಲ್ಲಿ ಇರುವ ಕಾಲದಲಿ ಪರಮ ಪುರುಷನ ಕಂಡು ಮರುಳಾಗಿ ಮೋಹಿಸುತ ಮರುಗುವಳು ಮತ್ತ್ಯಾಳಿಪ ಜ್ವರವಲ್ಲವಿದು ಕಾಮಜ್ವರವಮ್ಮ ತಿಳಿಯೆ ॥ ೨ ॥ ಕೊರವಿಯಾ ಧ್ವನಿ ಕೇಳಿ ಹೊರಗೆ ಬಂದದ್ದು ಕೇಳು ಮರುಳು ಮಾಡಿರುವ ಆ ಪರಮ ಪುರುಷನ ಮಹಿಮೆ ಸರಸಾಗಿ ನಾ ಮೇಲುಸ್ವರದಿಂದ ನುಡಿಯುತಲೆ ಬರುವಾಗ ತಾ ಕೇಳಿ ಹೊರಗೆ ಬಂದಳು ಈಕೆ ಸ್ಮರಿಸಿ ಅವನಾ ॥ ಪರಮ ಉತ್ತಮನಾದ ವರ ಹ್ಯಾಗೆ ಈಕೆಗೆ ದೊರಕುವನು ಎಂತೆಂಬ ಪರಮ ಈ ಚಿಂತೆಯಲಿ ಸೊರಗಬೇಡಮ್ಮ ನೀ ವರ ಅವನೆ ತಿಳಿ ಸತ್ಯ ಕರೆದು ಕೊಡು ಅವಗೆ ಈ ವರಪುತ್ರಿಯನ್ನಾ ॥ ೩ ॥ ಎಲ್ಲಿರುವನವನ್ಯಾರು ಬಲ್ಲವರು ಯಾರೆಂದು ಫುಲ್ಲಾಕ್ಷಿ ನೀನು ಮನದಲ್ಲಿ ಚಿಂತಿಸಬೇಡ



ಬಲ್ಲೆನಾತನ ನಾನು ಬಲ್ಲಿದ ವೈಕುಂಠದಲ್ಲಿರುವ ಶ್ರೀರಮಾವಲ್ಲಭನು ಕಾಣೆ ॥ ಚಲ್ವ ಶ್ರೀಶೇಷಾದ್ರಿಯಲ್ಲಿರುವ ಈ ಕಾಲದಲ್ಲಿ ಆತನ ಕಂಡು ವಲ್ಲಭನು ಇವ ಎನಗೆ ಸಲ್ಲುವನು ಎಂದು ಮನದಲ್ಲಿ ಬಯಸುತ ಖೂನದಲ್ಲಿ ಕುಲಗೋತ್ರಗಳು ಎಲ್ಲ ಕೇಳುತ್ತ ಪ್ರೇಮದಲ್ಲಿ ಕಲಹನ ಮಾಡಿ ಎಲ್ಲ ಗೆಳತೆರ ಕೂಡಿ ಕಲ್ಲುಕಲ್ಲಿಲೆ ಒಗೆದು ಬಲ್ಲಿದಾತನ ಕುದುರೆ ಅಲ್ಲಿ ಕೊಂದಳು ಈಕೆ ಎಲ್ಲಾನು ಈ ಮಾತು ಅಲ್ಲಾದರೀಕೆನ ಇಲ್ಲಿ ಕೇಳೇ ॥ ॥ ೪ ॥ ಅಂದ ಮಾತನು ಕೇಳಿ ಮುಂದೆ ಪದ್ಮಾವತಿಯು ಮಂದಹಾಸದಿನಕ್ಕು ಮುಂದೆ ತಲೆ ಬಾಗುತಲೆ ಚಂದಾಗಿ ಮನಸಿಗೆ ತಂದು ಪಾದಾಂಗುಷ್ಠದಿಂದ ನೆಲ ಬರದಳಾಗೊಂದು ನುಡಿಯದಲೆ ॥ ಮುಂದೆ ಪದ್ಮಾವತಿಯ ಮುಂದೆ ನುಡಿದಳು ಕೊರವಿ ಸುಂದರಿಯೆ ಜ್ವರತಾಪದಿಂದ ನಿನ್ನೊಳು ನೀನೆ ನೊಂದುಕೊಂಬುವಿ ದಾರ ಮುಂದೆ ಆಡುವಳಲ್ಲ ಮುಂದಕ್ಕೆ ಬಾ ನಿನಗೆ ಮುಂದೆ ಹಿತ ಪೇಳುವೆನು ಸಂದೇಹಪಟ್ಟು ಭಯದಿಂದ ಅಂಜಲುಬೇಡ ಇಂದುಮುಖಿ ನಾ ಪ್ರೀತಿಯಿಂದ ವೆಂಕಟಪತಿಯ ಚಂದ ಪಾದರೇಣು ಇಂದು ಕೊಡುವೆನು ನಿನಗೆ ಬಂದ ಜ್ವರ ಈಗ ತ್ವರದಿಂದ ಓಡುವದು ॥ ೫ ॥ ವಾರಿಜಾಕ್ಷಿಯೆ ಕೈಯ ತೋರು ಷೇಳುವೆ ನಿನ್ನ ಸಾರ ಸಾಮುದ್ರಿಕೆಯು ಪೂರ್ವದಲಿ ಪೇಳಿದ ನಾರದನು ವನದಲ್ಲೆ ನಾರಿ ಸುಳ್ಳಲ್ಲ ತಿಳಿ । ಬೇರೆ ಪೇಳುವೆ ಮತ್ತೆ ಚಾರು ಚಿಹ್ನಾ ॥ ತೋರುವದು ಕೈಯಲ್ಲಿ ಚಾರು ಚಕ್ರದ ಚಿಹ್ನ ಸಾರ ಮತ್ಸ್ಯದರೇಖೆ ತೋರುವದು ಧನರೇಖೆ ಪಾರ್ಶ್ವಕನ್ನದರೇಖೆ ತೋರುವದು ಮಂಗಳಾಕಾರಾಗಿ ಬಹು ಪ್ರೀತಿಕರವಾದ ಮತ್ತೆ ಚಾರು ದಂಪತಿರೇಖೆ ತೋರುವದು ನೋಡೇ ॥ ೬ ॥ ಉತ್ಸವದಿ ಆಯುಷ್ಯ ಹೆಚ್ಚುಮಾಡುವ ರೇಖೆ ಸ್ವಚ್ಛದಿಂದಲಿ ನೋಡು ಹೆಚ್ಚಿನಾಭರಣದಲಿ ಮುಚ್ಚಿರುವ ಮೊಲೆಮೂಗು ಅಚ್ಚ ಭಂಗಾರಖರಳ್ಹಚ್ಚಿ ಕೂಡಿಸಿದಂತೆ ಸ್ವಚ್ಛ ತೋರುವದು ಮಚ್ಛಕಂಗಳೆ ನಾನು ಮುಚ್ಚಿ ಹೇಳುವಳಲ್ಲ ॥ ಸ್ವಚ್ಛ ಎಡದೊಡೆಯಲ್ಲಿ ಮಚ್ಛ ಲಕ್ಷಣ ಉಂಟು ಹೆಚ್ಚು ಪೇಳಲಿ ಯೇನು ಹೆಚ್ಚಿನೊಳಗೆಲ್ಲಾ ಹೆಚ್ಚು ಮಂಗಳರೇಖೆ ನಿಶ್ಚಳಾಗಿರುತಿಹದು ನಿಶ್ಚಯದಿ ಕೊರಳಲ್ಲಿ ಅಚ್ಯುತನೆ

ತಾ ನಿನಗೆ ಮೆಚ್ಚಿ ಪತಿ ಆಗುವನು ನಿಶ್ಚಯವು ತಿಳಿಯೆ ॥ ೬ ॥ ಇಷ್ಟು
ಮಾತುಗಳ ಹೇಳಿ ಧಿಟ್ಟ ವೆಂಕಟಪತಿಯ ಶ್ರೇಷ್ಠ ಪಾದದ ರೇಣು ಕೊಟ್ಟು
ಪದ್ಮಾವತಿಗೆ ಇಟ್ಟು ಪಣೆಯಲಿ ತಿಲಕ ಇಷ್ಟಾರ್ಥಕರಹಸ್ತ ಇಟ್ಟು ಶಿರ
ದಲಿ ಅಭಯ ಕೊಟ್ಟು ಅರಸಿಯ ಮುಂದೆ ಸ್ಪಷ್ಟ ನುಡಿದಳು ಛಿಡೆಯ
ಬಿಟ್ಟು ಕೊರವೀ ॥ ಪಟ್ಟದರಸಿಯೆ ನೀನು ಘಟ್ಟಿಮನಸನು ಮಾಡಿ
ಬಿಟ್ಟದಾ ವೆಂಕಟಗೆ ಕೊಟ್ಟುಬಿಡು ಈಕೀನ ಬಿಟ್ಟು ಸಂಶಯ ಸೌಖ್ಯ
ಪಟ್ಟಾಳು ತಿಳಿ ಕೊಡದೆ ಬಿಟ್ಟರೀಕೆಗೆ ಮರಣ ತಟ್ಟುವದು ಇಂದೆ ॥ ೮ ॥
ದುಷ್ಟ ಕೊರವಿಯು ಎಂಥ ಕೆಟ್ಟ ನುಡಿದಳು ಎಂದು ಶಿಟ್ಟು ಮಾಡಲು
ಬೇಡ ಘಟ್ಯಾಗಿ ನಾ ನಿನಗೆ ಸ್ಪಷ್ಟಹಿತ ಪೇಳುವೆನು ಕಟ್ಟು ಪದರಿಗೆ
ಗಂಟು ಹುಟ್ಟಿಸಿ ಹೇಳುವಳಲ್ಲ ಕಟ್ಟಕಡೆಗದರಿಂದ ಹುಟ್ಟುವದು ಏನೆ
ನಗೆ ಶ್ರೇಷ್ಠಲಾಭಾ ॥ ಧಿಟ್ಟಾದ ಕುದುರೆ ಗುರಿಯಿಟ್ಟು ಕೊಂದಳು ಎಂಬ
ಶಿಟ್ಟಿರಲು ಈಕೀನ ಕೊಟ್ಟರಂಗೀಕಾರ ಪಟ್ಟಾನು ಹ್ಯಾಗೆಂದು ಇಷ್ಟಕ್ಕೆ
ಸಂದೇಹಪಟ್ಟು ನೀ ಬಿಡಬೇಡ ಶಿಟ್ಟಿಲ್ಲೆ ನಿತ್ಯಸಂತುಷ್ಟ ಮೂರುತಿಗೆ ॥
॥ ೯ ॥ ಇನ್ನೊಂದು ನಾ ನಿನಗೆ ಮುನ್ನ ಪೇಳುವೆ ಗುರುತ ಇನ್ನೊಂದು
ಘಳಿಗೆ ಮೇಲುನ್ನತಾಶ್ವವನೇರಿ ಚನ್ನಾಗಿ ಶೀಲಸಂಪನ್ನಳೊಬ್ಬಳು ಬಾಲೆ
ಪನ್ನಗಾಚಲದಿಂದ ನಿನ್ನಲ್ಲಿ ಬರುವೊಳು ಕನ್ಯಾರ್ಥಿಯಾಗೀ ॥ ನಿನ್ನ
ಪತಿಗೀ ಮಾತು ಚನ್ನಾಗಿ ತಿಳಿಹೇಳು ನಿನ್ನ ಮೈದುನಗ್ಹೇಳು ನಿನ್ನ
ಪುತ್ರಗೆ ಪೇಳು ನಿನ್ನ ಮಗಳನ ಕರೆದು ಮುನ್ನ ಏಕಾಂತದಲಿ ಇನ್ನೊಮ್ಮೆ
ನೀ ಕೇಳು ಚನ್ನವಾಗಿ ॥ ೧೦ ॥ ಖರೆಯಾದರಿನ್ನೊಮ್ಮೆ ಕರೆದು ಕೊಡು
ಬೇಡಿದ್ದು ಗುರುತವಲೆ ನಾ ನಿತ್ಯ ಇರುವೆನು ಬದರಿಯಲಿ ಸರಸಾಗಿ
ನಾನು ಬೇಸರದೆ ಬ್ರಹ್ಮಾಂಡೆಲ್ಲ ತಿರುಗಿ ಬಂದೆನು ಇಲ್ಲೆ ತಿರುಕೊಂಬ
ಆಶೆಯಲಿ ತಿರುಗುವಳು ನಾನಲ್ಲ ಪರಹಿತಾರ್ಥವೆ ಎನಗೆ ಪರಮ
ಕಾರ್ಯಾ ॥ ಪರಿಪರಿಯ ಜನರಿಗನುಸರಿಸಿ ಹೇಳಿದೆ ಹಿತವು ಉರಗ
ಮಂತ್ರವು ಬಲ್ಲೆ ಉರಿಯ ನುಂಗಲು ಬಲ್ಲೆ ಹರಿವ ಹಾವಿನ ಹೋಗಿ
ಹರುಷದಲಿ ಹಿಡಬಲ್ಲೆ ಪರರು ಹಾಕಿದ ವಿಷವ ಪರಿಹರಿಸಬಲ್ಲೆ ನಾ ಪರ
ತತ್ವವನು ಬಲ್ಲೆ ಮರಣಹೊಂದಿದವರನ ತಿರುಗಿ ಬದುಕಿಸಬಲ್ಲೆ ಹಿರಿಯ





ಹೊತ್ತಿಗೆ ಬಲ್ಲೆ ಶಿರಿಯ ಶಿಂಬಿಯ ಮಾಡಿ ಶಿರದಲ್ಲೆ ಬ್ರಹ್ಮಾಂಡ ಧರಿಸಿ
ತನಗಾಧಾರ ಇರದೆ ಬೈಲೊಳಗೆ ಕುಳಿತಿರುವಂಥ ದಿವ್ಯ ಆ ಪರಮ
ಪುರುಷನ ಬಲ್ಲೆ ಹರವ ಬ್ರಹ್ಮಾಂಡದೊಳಗಿರುವ ಭೂಗೋಲವಿಸ್ತಾರ
ವೆಲ್ಲವು ಬಲ್ಲೆ ಸ್ಥಿರವಾಗಿ ಪರಮ ಆದರದಿ ಕೇಳಿದರೆ ಬೇಸರದೆ ದೇಶಗ
ಳೆಲ್ಲ ಸರಸಾಗಿ ಪೇಳುವೆನು ಸರಸಿಜಾಕ್ಷೀ ॥ ೧೧ ॥

### ರಾಗ ಶಂಕರಾಭರಣ, ಆದಿತಾಳ.

ಕೊರವಿಯ ಮಾತನ್ನು ಕೇಳಿ ಹಿರಿಹಿರಿ ಹಿಗ್ಗುತ । ಅರಸಿ ಮಾತಾ
ಡಿದಳಾಗಾ ॥ ವರ ಧರ್ಮದೇವಿ ನೀ ಸರಿಯೆ ನಿನ್ನ ಮಾತಿಗೆ । ಹರುಷ
ವಾಯಿತು ಎನಗಿಂದೂ ॥ ೧ ॥ ಧನ್ಯಳಾದೆನು ನಾನು ನಿನ್ನಂಥ ಕೊರ
ವಿಯಾ । ಇನ್ನೊಬ್ಬಳನ ಕಾಣೇ ॥ ಇನ್ನ ನೀ ಪೇಳಿದಂತೆ ಮುನ್ನ ನಾ
ಮಾಡುವೆ । ನಿನ್ನ ಮಾತಿನಾ ಹೊರ್ತು ಇಲ್ಲೇ ॥ ೨ ॥ ಭುವನವಿಲಕ್ಷಣ
ದವಳೆ ನಿನ್ನನು ನೋಡಿ । ಎವೆಯಾನಿಕ್ಕಾವು ಎರಡು ಕಣ್ಣೂ ॥ ನವನವ
ತೋರುವ ಸವಿಯ ಮಾತನು ಕೇಳಿ । ಕಿವಿಯು ಎರಡು ಹಿಗ್ಗಿದಾವು ॥
॥ ೩ ॥ ಹೋಗಿ ಬ್ರಹ್ಮಾಂಡವೆಲ್ಲ ಹ್ಯಾಗೆ ತಿರುಗಿ ಬಂದಿ । ಹ್ಯಾಗಿರುವದು
ಬ್ರಹ್ಮಾಂಡಾ ॥ ಯೋಗಿ ಪರಮಪುರುಷ ಹ್ಯಾಗೆ ಧರಿಸೀಹನದನು ।
ಹ್ಯಾಗೆ ಭೂಗೋಲವಿಸ್ತಾರಾ ॥ ೪ ॥ ಬೇಸರಿಲ್ಲದೆ ಎಷ್ಟು ದೇಶ ತಿರುಗಿ
ಬಂದಿ । ಲೇಸಾಗಿ ಪೇಳೆನ್ನ ಮುಂದೇ ॥ ಶ್ರೀಶ ಶ್ರೀಮದನಂತಾದ್ರೀಶ
ಕೊರವಿ ಮಂದ । ಹಾಸದಿಂದಲಿ ನುಡಿದಳೂ ॥ ೫ ॥

### ವಚನ.

ಭೂಲೋಕದೊಳಗಿರುವ ಬಾಲೆಯರ ವಳಗೆ ಬಹು ಮೇಲಾದ
ವಳೆ ನೀನು ಕೇಳಮ್ಮ ನಾ ನಿನಗೆ ಪೇಳುವೆನು ಹರುಷದಲಿ ಕೇಳುವರು
ಆದರದಿ ಕೇಳಿದರೆ ಮತ್ತಿಷ್ಟು ಹೇಳುವರಿಗಾಗುವುದು ಉಲ್ಲಾಸಾ ॥
ಆಲಿಸೀ ಕೇಳಮ್ಮ ಮೂಲ ಪೇಳುವೆನು ಈ ಏಳು ಲೋಕಕೆ ಎಲ್ಲ ಆಲ
ಯಾಗಿರುವ ಸುವಿಶಾಲ ಬ್ರಹ್ಮಾಂಡದ್ಗೋರಗಾಲಯವು ಒಂದಿಲ್ಲ ಲೇಸಾ
ಗಿರುವದು ಮೂಲ ಅವ್ಯಾಕೃತಾಕಾಶ ತಾನೆ ॥ ೧ ॥ ಅತ್ತಿತ್ತ ನಾಲ್ಕು ಕಡೆ

ಮತ್ತೆ ಮೇಲಕೆ ಕೆಳಗೆ ಎತ್ತ ನೋಡಿದರೇನು ಸುತ್ತಲೆ ಬೈಲುಂಟು ಮತ್ತಲ್ಲೆ ಪರಮ ಪುರುಷೆಂಬ ಹರಿ ತಾನು ಅಂತರಲೆ ಕುಳಿತಿರುವ ಅಂತ ತಿಳಿಗೊಡದೆ ॥ ಶಕ್ತಿನಾಮಕಳಾದ ಚಿತ್ತದೊಲ್ಲಭೆ ಎನ್ನ ಸುತ್ತಿ ಸಿಂಬಿಯು ಮಾಡಿ ನೆತ್ತಿಯಾ ಮೇಲಿಟ್ಟು ಪೊತ್ತಿಹನು ಬ್ರಹ್ಮಾಂಡ ಸುತ್ತಲಿರುವದು ಅದಕೆ ಸಪ್ತದಶ ಆವರಣ ಕ್ಲೃಪ್ತವಾಗೀ ॥ ೨ ॥ ಶ್ರೀವಾಸುದೇವ ಪ್ರಥಮಾವರಣ ಹೊರಗೆ ತಾ ಶ್ರೀವಿಷ್ಣು ತಿಳಿ ದ್ವಿತೀಯ ಆವರಣ ತೃತೀಯ ತಾ ದೇವಸಂಕರ್ಷಣನು ಕೇವಲಾಗಿಹ ಚತುರ್ಥಾವರಣ ಪ್ರದ್ಯುಮ್ನ ದೇವ ಅದರೊಳು ಪಂಚಮಾವರಣ ಅನಿರುದ್ಧ ದೇವಿ ವಿರಜಾನದಿಯು ಆವರಣಷಷ್ಠ ತಿಳಿ ದೇವಿ ಶ್ರೀಸಹ ಸಪ್ತಮಾವರಣ ಯೆನಿಸುವಳು ಮೂಲಪ್ರಕೃತೀ ॥ ಭಾವದಲಿ ತಿಳಿ ಮೂರು ಆವರಣ ಮೂರುಗುಣ ಆವರಣ ಅದರೊಳಗೆ ಅದು ಮಹತ್ತತ್ವ ಮುಂದಾವರಣ ಅದರೊಳಗ ಹಂಕಾರತತ್ವ ಮತ್ತಾವರಣ ಒಳಗೈದು ಪಂಚಭೂತಗಳೂ ॥ ೩ ॥ ಅದಕಿಂತ ಮತ್ತೊಳಗೆ ಉದಕುಂಟು ಸುತ್ತೆಲ್ಲ ಅದಕೆ ಬಹಿರಾವರಣ ಉದಕಯೆಂತೆಂಬುವರು ಅದರೊಳಗೆ ಕೂರ್ಮರೂಪದಲಿ ಪೊತ್ತಿಹವಿಷ್ಣು ಮುದದಿ ಬ್ರಹ್ಮಾಂಡಲ್ಲೆ ಅದು ನೂರುಕೋಟಿಗಾವದ ಉಂಟು ತಿಳಿ ಚಂದ್ರವದನೆ ನೀನೂ ॥ ಅಪರ ಖರ್ಪರಘಡತರ್ರೈವತ್ತು ಕೋಟಿ ಮುಂದದರೊಳಗೆ ವಿಸ್ತಾರ ಐಷತ್ತು ಕೋಟಿ ತಿಳಿ ಅದರೊಳಗೆ ತಳದಲ್ಲಿ ಉದಕ ಇರುವದು ಮತ್ತೆ ಅದರ ಪರಿಮಿತಿ ಕೇಳು ಹದಿನೈದುಕೋಟಿ ಗಾವದ ಉಂಟು ಚಂದಾಗಿ ಅದಕೆ ಹೆಸರುಂಟು ಗರ್ಭೋದಕವು ಎಂದೂ ॥ ೪ ॥ ಕೇಳಮ್ಮ ಅದರೊಳಗೆ ಮೂಲಕೂರ್ಮನು ವಿಷ್ಣು ಮೇಲೆ ಕೂರ್ಮನು ವಾಯು ಮೇಲೆ ಶೇಷನು ತಾನು ಸಾಲ್ಹಿಡಿದು ಸಾವಿರ ವಿಶಾಲ ಹೆಡೆಗಳ ಒಳಗೆ ಮೇಲಾದ ಒಂದ್ಹೆಡೆಯ ಮೇಲೊಂದು ಸಾಶಿವೆಕಾಳು ಇಟ್ಟಂತೆ ಭೂಗೋಲ ಪೊತ್ತಿಹನೂ ॥ ಮೂಲಗ್ಗರ್ಭೋದಕದ ಮೇಲೆ ದಶಕೋಟಿ ಒಂದೇ ಲಕ್ಷ ಕಡಿಮೆ ಭೂಗೋಲಲಕ್ಷಪರಿಮಿತಿ ಮುಂದೆ ಭೂಲೋಕದಾರಭ್ಯ ಮೇಲೆ ಸೂರ್ಯನ ತನಕ ಕೇಳು ಆಕಾಶ ಒಂದೆ ಲಕ್ಷಪರಿಮಿತಿಯು ಲೋಲಲೋಚನೆಯೆ ॥ ೫ ॥ ಸುತ್ತಬ್ರಹ್ಮಾಂಡದೊಳಗತ್ಯಂತ



ಮಧ್ಯಕಾದಿತ್ಯಮಂಡಲ ಉಂಟು ಉತ್ತಮಳೆ ಕೇಳು ಆದಿತ್ಯಮಂಡಲ ಹಿಡಿದು ಮತ್ತೆ ಖರ್ಪರತನಕ ಸುತ್ತೆಲ್ಲ ನಾಲ್ಕು ಕಡೆ ಮತ್ತೆ ಮೇಲಕೆ ಕೆಳಗೆ ಕ್ಲೃಪ್ತಯೋಜನವು ಇಪ್ಪತ್ತೈದು ಕೋಟೀ ॥ ಮೂಲಶೇಷನ ತಲೆಯ ಮೇಲೆ ಪಾಷಾಣಮಯ ಮೂಲಭೂಮಿಯು ಉಂಟು ಮೇಲುಂಟು ನರಕಯೆಂಬೊ ಲೋಕ ಮುಂದರ ಮೇಲೆ ಸಾಲ್ಹಿಡಿದು ಹದಿನಾಲ್ಕು ಲೋಕಗಳುಂಟು ಲೇಸಾಗಿ ಎಲ್ಲಕು ಮೇಲೆ ವೈಕುಂಠಾ ॥ ೬ ॥ ಈ ಲೋಕದಾ ಕೆಳಗೆ ಯೇಳು ಲೋಕಗಳುಂಟು ಈ ಲೋಕದಾರಭ್ಯ ಮೇಲೇಳು ಲೋಕಗಳು ಕೇಳು ಅವುಗಳ ಹೆಸರು ಭೂಲೋಕ ಭುವರ್ಲೋಕ ಸ್ವರ್ಲೋಕ ಮಹರ್ಲೋಕ ಮೇಲಕ್ಕೆ ಜನೋಲೋಕ ಮೇಲಕೆ ತಪೋಲೋಕ ಮೇಲುಂಟು ಸತ್ಯಯೆಂಬೋ ಲೋಕ ತಿಳಿಯೆ ॥ ಮಾತೆ ಈ ಭೂಲೋಕದಾ ಕೆಳಗೆ ಲೋಕಗಳು ನೀ ತಿಳಿಯೆ ಅವು ಅತಳ ವಿತಳ ಸುತಳವು ಮತ್ತೆ ತಳಾತಳ ಮಹಾತಳ ರಸಾತಳವು ಮೂಲದಲಿ ಪಾತಾಳ ಎಂದೆನಿಸಿ ನಾಥ ಶ್ರೀಹರ್ಯಂಗಜಾತವಾಗಿಹವಲ್ಲೆ ಆತನೆ ವಿರಾಟರೂಪಿ ಖ್ಯಾತನಾಗಿರುವಾ ॥ ೭ ॥ ಪಾತಾಳವೆಂಬುವದು ಆತನಂಗಾಲವು ರಸಾತಲವು ಎಂಬುವದು ಆತನ ಹಿಂಬಡಪಾದ ಆತನಾ ಹರಡವು ಮಹಾತಳವು ಮೇಲಕೆ ತಳಾತಳವು ಎಂಬುವದು ಆತನಾ ಕಣಕಾಲು ಅತನಾ ಮೊಣಕಾಲಿಗಾತು ಸುತ್ತಲಿರುವದು ಆತನಾ ತೊಡೆಗಿಹವು ಆತು ವಿತಳಾತಳವು ಆತನಾ ಪತ್ಸಳವು ಭೂತಳೆನಿಸುವದು ॥ ಆತನಾ ನಾಭಿ ವಿಖ್ಯಾತಭುವನ ಎನಿಸುವದು ಆತನಾ ಹೃದಯ ಪ್ರಖ್ಯಾತ ಸ್ವರ್ಲೋಕವದು ಆತನಾ ಕಂಠಸಂಜಾತ ಮಹ ಎನಿಸುವದು ಆತನಾ ವದನಸಂಭೂತ ಜನ ಎನಿಸುವದು ಆತನಾ ಫಣೆಯು ವಿಖ್ಯಾತ ತಪ ಎನಿಸುವದು ಆತನಾ ಶಿರವು ಪ್ರಖ್ಯಾತವದು ಸತ್ಯಾ ॥ ೮ ॥ ಸುತ್ತೆಲ್ಲ ತಿರಿಗಿ ಈ ಪೃಥ್ವಿಯಲಿ ನಾ ಬಂದೆ ಮತ್ತಿದರ ವಿಸ್ತಾರ ಚಿತ್ತಿಟ್ಟು ಕೇಳು ಐವತ್ತು ಕೋಟಿಯು ಇದಕೆ ಸಪ್ತದ್ವೀಪಗಳುಂಟು ಮತ್ತಲ್ಲೆ ನಡುನಡುವೆ ಸುತ್ತಲೆ ಸಮುದ್ರಗಳು ಸಪ್ತ ಪರಿಮಿತಿಯಿಂದ ಕ್ಲೃಪ್ತವಾಗಿಹವೂ ॥

ಬಿಂಬೋಷ್ಠೆ ಕೇಳೆ ಸಪ್ತವೆಂಬುವ ದ್ವೀಪಗಳು ಜಂಬೂದ್ವೀಪವು ಪ್ಲಕ್ಷ
ವೆಂಬೋ ದ್ವೀಪ ಶಾಲ್ಮಲೆಂಬುವ ದ್ವೀಪ ಮತ್ತೆ ಇಂಬಾದ ಕುಶದ್ವೀಪ
ಕಂಬುಕಂಠಿಯೆ ಕ್ರೌಂಚವೆಂಬುವ ದ್ವೀಪ ಶಾಕವೆಂಬೋ ದ್ವೀಪ ಪುಷ್ಕ
ರೆಂಬುವ ದ್ವೀಪ ತಿಳಿಯೆ ಅಂಬುಜಾಕ್ಷೀ ॥ ೯ ॥ ಬೋಧಿಸುವೆ ಕೇಳು
ನೀ ಸಪ್ತೋದಧಿಗಳ ಇನ್ನು ಲವಣೋದಧಿ ಇಕ್ಷುಸಾರೋದಧಿಯು
ವಿಸ್ತೃತ ಸುರೋದಧಿಯು ಮುಂದಕೆ ಘೃತೋದಧಿಯು ದಧಿಯ
ಮಂಡೋದಧಿಯು ಕ್ಷೀರಸಾರೋದಧಿಯು ದಿವ್ಯ ಸ್ವಾದೋದಧಿಯು
ತಿಳಿ ನುಡಿಯ ಸ್ವಾದಬಲ್ಲವಳೆ ॥ ಲಕ್ಷಗಾವುದ ಚಂಚಲಾಕ್ಷಿ ಜಂಬು
ದ್ವೀಪ ಪ್ಲಕ್ಷದ್ವೀಪವು ಎರಡುಲಕ್ಷ ಗಾವುದ ನಾಲ್ಕುಲಕ್ಷ ಶಾಲ್ಮಲ
ಎಂಟು ಲಕ್ಷ ಕುಶ ಹದಿನಾರುಲಕ್ಷ ಕ್ರೌಂಚವು ಶಾಕ ಲಕ್ಷ ಮೂವತ್ತೆ
ರಡು ಲಕ್ಷ ಅರವತ್ನಾಲ್ಕು ಪುಷ್ಕರದ್ವೀಪಾ ॥ ೧೦ ॥ ಇದರಂತೆ ತಿಳಿಯಮ್ಮ
ಚದುರೆ ಸಾಗರ ಸಪ್ತ ಅದರ ಸುತ್ತಲೆ ಸುವರ್ಣದ ಭೂಮಿ ಇರುವುದು
ಅದರ ಸುತ್ತುಂಟು ವಜ್ರದ ಭೂಮಿ ಮುಂದೆ ಮತ್ತದರ ಸುತ್ತಲೆ
ಅವಾದಪರಿಯುಗಿರಿ ಉಂಟು ಸುದತಿ ಲೋಕಾಲೋಕವೆದ್ದು ತಿಳಿಯೆ
ನೀನೂ ॥ ಅದರ ಸುತ್ತಲೆ ಇರುವದದು ಅಂಧಂತಮ ಮತ್ತೆ ಅದರ
ಸುತ್ತಲೆ ಇರುವದು ಘನೋದಕ ಮತ್ತೆ ಅದರ ಸುತ್ತಲೆ ಇರುವದು
ಅನಂತಾಸನವು ಅದರ ಸುತ್ತಲೆ ಇರುವದು ಅಂಡಖರ್ಪರವು ಅದು ಬಲ್ಲಿ
ನೀನು ಹೇಳಿದೆ ಮುಂಚೆ ನಾನೂ ॥ ೧೧ ॥ ಹೆತ್ತವ್ವ ನೀ ಕೇಳೆ ಮತ್ತೆ
ಸ್ವರ್ಣದ ಭೂಮಿ ಕ್ಲ್ಪಪ್ತ ಪೇಳುವೆನು ಎಂಭತ್ತನಾಲ್ಕರ ಮೇಲೆ ಮತ್ತ
ರ್ಧಲಕ್ಷ ಅದಖತ್ತಿ ಇರುವದು ವಜ್ರಯುಕ್ತಭೂಮಿಯು ಲಕ್ಷಕ್ಲ್ಪಪ್ತ
ಒಂದುವರೆಯು ಸುತ್ತ ಲೋಕಾಲೋಕ ಕ್ಲ್ಪಪ್ತ ತಿಳಿ ನೀನು ಐವತ್ತು
ಸಾವಿರವು ಐವತ್ತು ಲಕ್ಷಾ ॥ ಸಪ್ತಕೋಟಿಯು ತಮಸು ಕ್ಲ್ಪಪ್ತಲಕ್ಷವು
ಕಡಿಮೆ ಹತ್ತಿರುವ ದಧಿಯ ಪರಿಸುತ್ತಲೆ ಘನೋದಕವು ಸಪ್ತಕೋಟಿಯು
ಮೇಲೆ ಸಪ್ತಕೋಟಿಯು ಮತ್ತೆ ಕ್ಲ್ಪಪ್ತ ಅದರೊಳಗೆರಡು ಲಕ್ಷ ಕಡಿ
ಮೆಯು ತಿಳಿಯೆ ಮತ್ತನಂತಾಸನವು ಕ್ಲ್ಪಪ್ತ ಲಕ್ಷವು ಮೂರುಸುತ್ತಲೆ
ಒಳಗೆ ಮಧ್ಯವರ್ತಿ ಜಂಬುದ್ವೀಪ ಮಧ್ಯಭೂಮಿಯ ಹಿಡಿದು ಮತ್ತೆ



ಖರ್ಪರತನಕ ಎತ್ತ ನೋಡಿದರು ಇಪ್ಪತ್ತೈದು ಕೋಟೀ ॥ ೧೨ ॥ ಜಂಬಾ
ಲಜಾಕ್ಷಿ ಕೇಳು ಜಂಬುದ್ವೀಪದ ವಿವರ ಒಂಭತ್ತುಖಂಡಗಳು ಇಂಬಾಗಿ
ಒಂದೊಂದೆ ಒಂಭತ್ತು ಸಾವಿರವು ಎಂಬೊ ಗಾವುದ ಇಹವೂ ಒಂಭತ್ತು
ಖಂಡಕೇನೆಂಬ ನಾಮವು ನಿನಗೆ ಬಿಂಬಿಸುವೆ ಕೇಳು ಚಂದ್ರಬಿಂಬೆ
ವದನೆ ॥ ವರ ಇಳಾವೃತಖಂಡ ಪರ ಕೇತುಮಾಲಖಂಡ ಪರಮರಮ್ಯಕ
ಖಂಡ ವರಹಿರಣ್ಮಯುಖಂಡ ಕುರುಖಂಡ ಭದ್ರಾಶ್ವ ಸರಸವಾಗಿಹ ಖಂಡ
ಹರಿವರ್ಷಖಂಡ ಕಿಂಪುರುಷೆಂಬೊ ಖಂಡ ಈ ಭರತ ಖಂಡಾ ॥ ೧೩ ॥
ಗುರುತದಿಂದಲಿ ಎಂಟು ಪರ್ವತಂಗಳು ಇಹವು ಸರಸಾಗಿ ಎಲ್ಲಕ್ಕು ಎರ
ಡೆರಡುಸಾವಿರದ ಪರಿಮಿತಿಯು ಅವು ಅಲ್ಲೆ ಇರುವ ನವಖಂಡಕ್ಕೆ
ಮರ್ಯಾದೆ ತಿಳಿ ಬಹುಮರ್ಯಾದೆಯುವಳೇ ॥ ಸರಸಾಗಿ ಕೇಳು ಆ
ಗಿರಿಗಳನು ಮಾಲ್ಯವಾನ್ಗಿರಿ ನೀಲಗಿರಿ ಶ್ವೇತಗಿರಿ ಶೃಂಗವಾನ್ಗಿರಿಯು
ಗಿರಿಗಂಧಮಾದನವು ಗಿರಿ ನಿಷಧವೆಂಬುವದು ಗಿರಿ ಹೇಮಕೂಟ ವರ
ಗಿರಿ ಹಿಮಾಲಯವೂ ॥ ೧೪ ॥ ಮಧ್ಯದಲ್ಲಿರುವದು ಶುದ್ಧ ಚತುರಸ್ರಾಗಿ
ಇದ್ದಿಳಾವೃತಖಂಡ ಶುದ್ಧ ಕನಕಾತ್ಮಕಾಗಿದ್ದಂಥ ಮೇರುಗಿರಿ ಉದ್ದ ಲಕ್ಷವು
ಅದರ ಮಧ್ಯದಲ್ಲಿರುವದು ಮದ್ಗಣಿಕೆ ಹೂವಿನಂತಿದ್ದ ಅದರಾಕಾರ
ಬುದ್ಧಿವಂತೆಯೆ ತಿಳಿಯೆ ಬುದ್ಧಿಯಿಂದಾ ॥ ಧರೆಯೊಳಗೆ ಉದ್ದನಟ್ಟಿರುವ
ಧದಿನಾರುಸಾವಿರವು ಹೊರಗುದ್ದ ಸಾವಿರವು ಎಂಭತ್ತಮೇಲ್ ನಾಲ್ಕು
ಇರುತಿಹುದು ಕೇಳು ಮೇಲಿರುವ ಅಡ್ಡಾಗಲವು ಸರಸಾಗಿ ಮುವತ್ತೆರಡು
ಸಾವಿರತಳಕೆ ಇರುವ ಹದಿನಾರುಸಾವಿರದ ಅಡ್ಡಾಗಲವು ಪರಿಮಿತಿಯು
ಕಾಣೆ ॥ ೧೫ ॥ ಕ್ಲ್ಪಪ್ತದಲಿ ಖಂಡ ಒಂಭತ್ತುಸಾವಿರ ಇರಲು ಹತ್ತು
ಸಾವಿರ ಮೇಲೆ ಮತ್ತಾರು ಸಾವಿರದ ವಿಸ್ತಾರಗಿರಿ ಅಲ್ಲೆ ಮತ್ತಿರುವ
ಧ್ಯಾಗೆಂದು ಚಿತ್ತಸಂಶಯ ಬೇಡ ಸತ್ಯ ಆ ಮೇರುವಿನ ಹೊರ್ತಿಳಾವೃತ
ಖಂಡ ಸುತ್ತಲಿರುವದು ಒಂಭತ್ತು ಸಾವಿರವೇ ॥ ಶುದ್ಧ ಪಶ್ಚಿಮ ಪೂರ್ವ
ಕಿದ್ದಂಥ ಲವಣಸಮುದ್ರ ಅವಧಿಯು ಆಗಿದ್ದಂಥ ಕೇತುಮಾಲ್ಭದ್ರಾಶ್ವ
ಖಂಡಗಳು ಮದ್ದಲೆಯ ಪರಿ ತಗ್ಗು ಇದ್ದ ಕಾರಣದಿಂದ ಒದ್ದು ಬರು
ವದು ನೀರು ಶುದ್ಧ ವಣಭೂಮಿ ಒಂಭತ್ತುಸಾವಿರವೇ ॥ ೧೬ ॥

ಹರಿಣಾಕ್ಷಿ ದಕ್ಷಿಣಕೆ ಹರಿವರ್ಷಖಂಡ ಕಿಂಪುರುಷಖಂಡವು ಮತ್ತೆ ಸರ
ಸಾಗಿ ಉತ್ತರಕೆ ಪರಮ ರಮ್ಯಕಖಂಡ ವರ ಹಿರಣ್ಮಯಖಂಡ ಸರಸಾಗಿ
ಅವು ನಾಕು ಕೊರದ ದಂಡಾಕಾರಪರಿ ಇಹವು ನೋಡೇ ॥ ಅಲ್ಲ್ಯೆತ್ತ
ರಾಬ್ಧಿ ಬದಿಯಲ್ಲಿರುವ ಕುರುಖಂಡ ಇಲ್ಲೇ ದಕ್ಷಿಣಕಿರುವ ಬಲ್ಲಿದಬ್ಧಿಯ
ತೀರದಲ್ಲಿ ಭಾರತಖಂಡ ಫುಲ್ಲಾಕ್ಷಿ ನೀನು ಮನದಲ್ಲಿ ತಿಳಿ ಸಮ ಎರಡು
ಬಿಲ್ಲಿನಾಕಾರಾ ॥ ೧೭ ॥ ಗಿರಿಗಂಧಮಾದನವು ಇರುತಿಹುದು ಪೂರ್ವಕ್ಕೆ
ವರಮಾಲ್ಯವಾನ್ ಗಿರಿಯು ಇರುತಿಹುದು ಪಶ್ಚಿಮಕೆ ಗಿರಿ ನೀಲಗಿರಿ
ಶ್ವೇತಗಿರಿ ಶೃಂಗವಾನೆಂದು ಇರುತಿಹವು ಉತ್ತರಕೆ ಗಿರಿನಿಷಧವೆಂಬು
ವದು ಗಿರಿ ಹೇಮಕೂಟ ವರಗಿರಿ ಹಿಮಾಲಯವೆಂದು ಇರುತಿಹವು
ದಕ್ಷಿಣಕೆ ಅರಸಿ ನೀ ಆ ಎಂಟು ಗಿರಿಯ ಆಕಾರ ತಿಳಿ ಗೇರಿಯು ಕೊರ
ದಂತೇ ॥ ಸುತ್ತ ಗಿರಿಗಳ ಮಧ್ಯವರ್ತಿಯೆನಿಸುವ ಮೇರುಮಧ್ಯಭಾಗವ
ಹಿಡಿದು ಮತ್ತೆ ಸಾಗರತನಕ ಎತ್ತ ನೋಡಿದರು ಐವತ್ತು ಸಾವಿರ ಕ್ಲ್ಪಪ್ತ
ಸತ್ಯವಂತೆಯೆ ತಿಳಿಯೆ ಸತ್ಯವಾಣೀ ॥ ೧೮ ॥ ಧಿಟ್ಟಾದ ಆ ಮೇರು
ಬೆಟ್ಟದಾ ಮೇಲ್ಕೇಳು ಅಷ್ಟದಿಗ್ಭಾಗದಲಿ ಅಷ್ಟದಿಕ್ಪಾಲಕರ ಅಷ್ಟ ಗೃಹ
ಗಳು ಉಂಟು ನಟ್ಟನಡವಿರುತಿಹುದು ಸೃಷ್ಟಿಕರ್ತನ ಮನೆಯು ಶ್ರೇಷ್ಠ
ವಾಗೀ ॥ ಮೇಲಂತರಿಕ್ಷದಲಿ ಕಾಲಚಕ್ರವು ಅಲ್ಲೆ ಕೇಳು ಸೂರ್ಯನ
ರಥದ ಗಾಲಿ ತಿರುಗುವದಲ್ಲೆ ಮೂಲದಲಿ ನಾ ಅದರ ಮೂಲ ಪೇಳುವೆ
ಮುಂಚೆ ಮೇಲೆ ವಿಸ್ತಾರವು ಆ ಮೇಲೆ ಕೇಳೇ ॥ ೧೯ ॥ ಮೂಲ ಆ
ಮೇರುಗಿರಿ ಮೇಲೆ ಶಿಂಶುಮಾರ ಹರಿ ಮೂಲದಲಿ ಮುಖ ಮಾಡಿ
ಮೇಲೆ ಪುಚ್ಛವ ಮಾಡಿ ಲೀಲೆಯಿಂದಿರುತಿರುವ ಕಾಲಚಕ್ರಕೆ ಅವನೆ
ಮೂಲ ಆಧಾರ ತಿಳಿ ತೈಲಗಾಣದ ಖಣಿಯ ಮೇಲೆ ಡಿಂಡಿನ ಪರಿಯು
ಕಾಲಚಕ್ರವು ತಿಳಿಯೆ ಕಾಳಾಹಿವೇಣೀ ॥ ಮೂಲ ಪುಷ್ಕರದ್ವೀಪ ಮೇಲೆ
ವಲಯಾಕಾರ ಮಾನಸೋತ್ತರಗಿರಿಯು ಮೂಲ್ಹಿಡಿದು ಉದ್ದೆಷ್ಟು ಮೇಲೆ
ಅಡ್ಡಾಗಲವು ಕೇಳು ದಶಸಹಸ್ರ ಮೇಲೆ ಸೂರ್ಯನ ರಥದ ಗಾಲಿ
ತಿರುಗುವದೂ ॥ ೨೦ ॥ ಸಪ್ತಾಶ್ವಗಳು ರಥಕೆ ಕ್ಲ್ಪಪ್ತವಾಗಿಹವು ಆದಿತ್ಯ
ರಥವನು ಜಗ್ಗಿ ಅಂತರಲೆ ಹಾರಿ ಅತ್ಯಂತ ಓಡುತ ಮೇರು ಸುತ್ತಲೆ



ಪ್ರದಕ್ಷಿಣೆಯು ನಿತ್ಯ ಮಾಡುತಲಿಹವು ಹೊತ್ತುಗಳಿಯದಲೇ ॥ ಮತ್ತೆ
ಮುಂಭಾಗಕರವತ್ತು ಸಾವಿರಸಂಖ್ಯ ಕ್ಲ್ಪಪ್ತಮುನಿಗಳು ಸೂರ್ಯನ
ತ್ಯಂತ ಸ್ತುತಿಸುವರು ಗಾತ್ರದಿಂದಂಗುಷ್ಠಮಾತ್ರಪರಿಮಿತಿ ಅವರು ಎಲ್ಲಾ
ರು ತಿಳಿ ವಾಲಖಿಲ್ಯರೆನಿಸುವರೂ ॥ ೨೧ ॥ ಮತ್ತಲ್ಲೆ ಗಂಧರ್ವರತ್ಯಂತ
ಗಾಯನವು ಒತ್ತಿ ಮಾಡುತಲಿಹರು ಸಪ್ತಸ್ವರಗಳು ಮೆಟ್ಟಿ ಮತ್ತೆ
ಸಂಗೀತಸಾಹಿತ್ಯದಿಂದಪ್ಸರರು ನರ್ತನವ ಮಾಡುವರು ಮತ್ತೆ ಗಜ
ಗಮನೆ ಕೇಳು ಮತ್ತವರು ಎಲ್ಲಾರು ಕ್ಲ್ಪಪ್ತ ಹಿಂಬರಕಿಯಲಿ ನಿತ್ಯ
ನಡೆವರು ಮೆಟ್ಟಿ ಎತ್ತಿನಂತೆ ॥ ಕಾಲಚಕ್ರದಲಿರುವ ಸಾಲುಗ್ರಹಗಳು
ಮತ್ತೆ ಕೇಳು ನಕ್ಷತ್ರಗಳು ಮೇಲೆ ಧ್ರುವಪದತನಕ ಸಾಲ್ಹಿಡಿದು ಪೇಳು
ವೆನು ಮೂಲಭೂಮಿಯ ಹಿಡಿದು ಮೇಲೆ ರಾಹುವತನಕ ಕೇಳು
ಯೋಜನವು ತೊಂಭತ್ತು ಸಾವಿರವೂ ॥ ೨೨ ॥ ಮೇಲ್ಹತ್ತು ಸಾವಿರದ
ಮೇಲ್ಸೂರ್ಯಮಂಡಲವು ಮೇಲ್ಲಕ್ಷದಲಿ ಚಂದ್ರ ಮೇಲ್ಲಕ್ಷ ತಾರೆಗಳು
ಮೇಲೆರಡುಲಕ್ಷ ಕವಿ ಮೇಲೆರಡುಲಕ್ಷ ಬುಧ ಮೇಲೆರಡುಲಕ್ಷ ಕುಜ
ಮೇಲೆರಡುಲಕ್ಷ ಗುರು ಮೇಲೆರಡುಲಕ್ಷ ಶನಿ ॥ ಮೇಲ್ಲಕ್ಷ ಹನ್ನೊಂದು
ಕೇಳೆ ಸಪ್ತಋಷಿಗಣವು ಮೇಲ್ಲಕ್ಷ ಹದಿಮೂರು ಮೇಲಾದ ಧ್ರುವಪದವು
ಮೇಲಾತನಾಗಿಂತ ಮೇಲಾದವರು ಇಲ್ಲ ಮೂಲ ಶಿಂಶುಮಾರನಾ
ಮೇಲಾದ ಪುಚ್ಛದಲಿ ಮೇಲೆ ಕುಳಿತಿರುವಾ ॥ ೨೩ ॥ ನಿತ್ಯ ಧ್ರುವಮಂಡ
ಲವ ಸುತ್ತಿ ತಿರುಗುವರೆಲ್ಲ ಕ್ಲ್ಪಪ್ತಕಲ್ಪದತನಕ ಮತ್ತಲ್ಲೆ ಮೇಲಿಂದ ಇತ್ತ
ಹರಿದು ಬರುತಿರುವ ಉತ್ತಮ ಸ್ವರ್ಣದಿಯ ಉತ್ಪತ್ತಿ ನೀ ಕೇಳೆ
ಉತ್ಸಾಹದಿಂದಾ ॥ ಸತ್ತ್ರಿವಿಕ್ರಮನೆಂಬ ಮೂರ್ತಿಯಾಗಿರುವ ಸರ್ವೋ
ತ್ತಮನ ವಾಮಪಾದೋತ್ತುಮಾಂಗುಷ್ಠನಖವತಿಮ್ಯಾಲ್ ಬ್ರಹ್ಮಾಂಡ
ಕ್ಷತ್ತಿ ಖರ್ಪರ ಒಡೆದು ಮತ್ತಲ್ಲೆ ಬಾಹ್ಯಜಲ ಇತ್ತ ಬಂಧರಿಪಾದಕ್ಷತ್ತಿ
ತೊಳೆವದರಿಂದ ಉತ್ಪನ್ನಳಾಗಿ ಭಗವತ್ಪದಿಯೆನಿಸುವಳು ಸತ್ಯನಾಮ
ದಲಿ ॥ ೨೪ ॥ ಮುಂದೆ ಕೇಳ್ಬಹುಕಾಲದಿಂದ ಧ್ರುವಮಂಡಲಕೆ ಬಂದು
ಆ ಮೇಲೆ ಅಲ್ಲಿಂದ ಶಶಿಮಂಡಲವು ಚಂದಾಗಿ ತೋಯಿಸಿ ಅಲ್ಲಿಂದ
ಬ್ರಹ್ಮನ ಮನೆಗೆ ಬಂದು ಬೀಳುತ ಮತ್ತೆ ಮುಂದೆ ಭಿನ್ನಳು ಆಗಿ

ಒಂದೊಂದು ನಾಮದಲಿ ಚಂದಾಗಿ ನಾಲ್ಕುಕಡೆ ಮುಂದೆ ಲವಣೋದಧಿಯ ಬಂದು ಕೂಡಿದಳೂ ॥ ಮಂದಗಮನೆ ಮೇರುವಿನಿಂದ ಪೂರ್ವಕನಾಮದಿಂದ ಸೀತಾನದಿಯು ಹಿಂದೆ ಚಕ್ಷುರ್ನದಿಯು ಎಂದೆನಿಸಿ ಆ ಮೇರುವಿಂದುತ್ತರಕೆ ನಾಮದಿಂದ ಭದ್ರಾನದಿಯು ಯೆಂದೆನಿಸಿ ಮತ್ತೆ ಅದರಿಂದ ದಕ್ಷಿಣಕೆ ಈ ಚಂದಾದ ಖಂಡದಲಿ ಬಂದಿಹಳು ತಾ ಅಲಕನಂದಾಖ್ಯನದಿಯೂ ॥ ೨೫ ॥ ಕಂಡಾಕ್ಷಣಕೆ ಪಾಪಖಂಡನವ ಮಾಡುವಾ ಉದ್ದಂಡ ನದಿಗಳು ಮತ್ತೆ ಗಂಡುನದಿಗಳು ಭರತಖಂಡದಲಿ ಇರುತಿಹವು ಕಂಡು ಬಂದೆನು ಕೇಳು ದುಂಡುದುರುಬಿನ ಬಾಲೆ ತಂಡತಂಡದಲೀ ॥ ಚಂದ್ರವಂಶಾನದಿಯು ಚಂದ್ರಭಾಗಾನದಿಯು ಚಂದಾಗಿ ಭೀಮರಥಿಯೆಂದೆನಿಸುವಾ ನದಿಯು ಮಂದನಗೆಮುಖದವಳೆ ಮಂದಾಕಿನೀನದಿಯು ವಿದ್ಯಾಖ್ಯನದಿಯು ಕಾಳಿಂದಿನದಿಯೂ ॥ ೨೬ ॥ ಸಿಂಧುನದ ಶೋಣನದವೆಂದೆರಡು ಗಂಡು ತಿಳಿ ಮುಂದೆ ನದಿಗಳು ಬಹಳ ಎಂದು ಅವುಗಳನೆಲ್ಲ ಒಂದೆ ಮಾತಿಲೆ ನಾನು ಮುಂದಾಗಿ ಪೇಳಿದೆನು ಮುಂದೆ ಗಿರಿಗಳ ಹೆಸರು ಚಂದಾಗಿ ಕೇಳೆ ॥ ವಿಂಧ್ಯವೆಂಬುವ ಗಿರಿ ಮಹೇಂದ್ರವೆಂಬುವ ಗಿರಿಯು ಚಂದನಾಶ್ರಯವಾದ ಚಂದಾದ ಮಲಯಗಿರಿ ಮುಂದೆ ಮೈನಾಕಗಿರಿ ಚಂದಚಂದದ ನಾಮದಿಂದಿರುವ ಗಿರಿಗಳನು ಕುಂದರದನೆಯೆ ಮತ್ತೆ ಮುಂದೆ ಕೇಳೆ ॥ ೨೭ ॥ ಗೋವರ್ಧನಾಖ್ಯಗಿರಿ ರೈವತಕವೆಂಬ ಗಿರಿ ಶ್ರೀವೇದಗಿರಿ ಮತ್ತೆ ಶ್ರೀಶೈಲವೆಂಬ ಗಿರಿ ಕೇವಲಾಧಿಕವಾದ ಶ್ರೀವೆಂಕಟಾಖ್ಯಗಿರಿ ದೇವಿ ಕೇಳೀ ನಿನ್ನಳಿಯ ದೇವ ಅಲ್ಲಿರುವಾ ॥ ವಪ್ಪಾಗಿ ಭೂಮಿಯಲ್ಲಿಪ್ಪ ಗಿರಿಗಳನೆಲ್ಲ ತಪ್ಪದಲೆ ಪೇಳಿದೆನು ಕ್ಲೃಪ್ತದಲಿ ಬಹಳುಂಟು ಚಪ್ಪನ್ನದೇಶಗಳು ತಪ್ಪದಲೆ ಪೇಳುವೆನು ಕೊಪ್ಪಿನಾ ಕಿವಿಯವಳೆ ವಪ್ಪಾಗಿ ಕೇಳೆ ॥ ೨೮ ॥ ಅಂಗದೇಶವು ಮತ್ತೆ ವಂಗದೇಶವು ವರ ಕಳಿಂಗವೆಂಬುವ ದೇಶ ಶೃಂಗಾರವಾಗಿರುವ ಬಂಗಾಲದೇಶ ಕಾಲಿಂಗಾಖ್ಯದೇಶ ಕಾಳಿಂಗವೇಣಿಯೆ ಕೇಳು ಹಾಗೆ ಮುಂದೆ ॥ ಕಾಮರೂಪದೇಶ ಕಾಶ್ಮೀರದೇಶ ವರಕಾಂಭೋಜದೇಶ ಶುಭಕೋಸಲೆಂಬುವ ದೇಶ ಕೈರಾತಿದೇಶ ವರಕೈಕೆಯದೇಶ ಕೇಳ್ ಕಂಕಣದ ಕೈಯಳೆ ಕೊಂಕಣ



ದೇಶಾ ॥ ೨೯ ॥ ಗುರ್ಜರೆಂಬುವ ದೇಶ ಪಾರ್ಶ್ವೈಕದೇಶ ಸುವಿದರ್ಭದೇಶವು ಶುಭದಶಾರ್ಣವೆಂಬುವ ದೇಶ ಸೌರಾಖ್ಯದೇಶ ಸೌವೀರದೇಶವು ಮತ್ತೆ ಶೂರದೇಶವು ಕೇಳೆ ಶೂರಪತ್ನೀ ॥ ನಾಟಕದ ದೇಶ ಕರನಾಟಕದ ದೇಶವು ಕರಾಟಕದ ದೇಶವು ಮರಾಟಕದ ದೇಶವು ಪನಾಟಕೆಂಬುವ ದೇಶ ನೀಟಾಗಿ ಇರುವ ಸೌರಾಷ್ಟ್ರದೇಶವು ಮಹಾರಾಷ್ಟ್ರದೇಶಾ ॥ ೩೦ ॥ ಏಣಲೋಚನೆ ಕೇಳು ಹೂಣನಾಮಕ ದೇಶ ಖೂನದಲಿ ಕುರುದೇಶ ಸೇನದೇಶವು ದೇಹ ಹೀನದೇಶವು ಮಂಜುಗಾನೆ ಟಂಕನದೇಶ ಗೌಡದೇಶಾ ॥ ಸೈಂಧವೆನಿಸುವ ದೇಶ ಸಿಂಧುವತಿದೇಶ ಕೇಳೆ ಮಂದ್ರದೇಶವು ಪರಪುರಂಧಿಯೆನಿಸುವ ದೇಶ ಆಂದ್ರಾಖ್ಯದೇಶ ಜಾಲಂದ್ರಯೆನಿಸುವ ದೇಶ ಗಾಂಧಾರದೇಶ ವರಗಂಧಿ ಕೇಳೀ ॥ ೩೧ ॥ ಚೋಳಾಖ್ಯದೇಶ ಪಾಂಚಾಲನಾಮಕದೇಶ ಮಾಲವೆಂಬುವ ದೇಶ ಸಾಲ್ವಾಖ್ಯದೇಶ ಸುವಿಶಾಲವಾಗಿರುವ ನೇಪಾಲದೇಶವು ಮತ್ತೆ ಬರಬರದೇಶ ಬಾಹ್ಲಿಕದೇಶಾ ॥ ಯವನಯಾವನವೆಂಬ ಅವು ದೇಶಗಳು ಎರಡು ದ್ರವಿಡ ದ್ರಾವಿಡವೆಂಬ ಅವು ಎರಡು ದೇಶಗಳು ಮಲಯಮಾಗಧವೆಂದು ಮಲಯಗಂಧಿಯೆ ಎರಡು ತಿಳಿಯಮ್ಮ ನೀ ಬಹಳ ತಿಳುವಳಿಕೆಯುವಳೇ ॥ ೩೨ ॥ ಸಿಂಹದ ನಡುವಳೆ ಸಿಂಹಲೆಂಬುವ ದೇಶ ಮಚ್ಛಗಂಗಳೆ ಕೇಳು ಮಚ್ಛದೇಶವು ಭ್ರಮರಕುಂತಳೆಯೆ ನೀ ಕೇಳು ಕುಂತಳೆಂಬುವ ದೇಶ ಪಂಡಿತಳೆ ನೀ ಕೇಳು ಪಾಂಡ್ಯದೇಶಾ ॥ ಇಷ್ಟು ದೇಶಗಳಿಂದ ಅಷ್ಟು ತೀರ್ಥಗಳಿಂದ ದಿಟ್ಟಾಗಿರುವದೀ ಶ್ರೇಷ್ಠ ಭಾರತಖಂಡ ಶಿಷ್ಟರೆಂಬುವರಿಲ್ಲೆ ಹುಟ್ಟಿ ಪುಣ್ಯದ ಬುತ್ತಿ ಕಟ್ಟಿ ವೈಕುಂಠವನು ಮೆಟ್ಟುವರು ಕಾಣೇ ॥ ೩೩ ॥ ಕಂಡು ಬಂದದ್ದು ಮನಗಂಡು ಪೇಳಿದೆನು ಬ್ರಹ್ಮಾಂಡದೊಳಗಿರುವ ಭೂಮಂಡಲಾದೊಳಗೆ ಏಳು ಥಂಡದ್ವೀಪಗಳೊಳಗೆ ದುಂಡ ಜಂಬೂದ್ವೀಪ ಮಂಡಲಾದೊಳಗೆ ನವಖಂಡದೊಳಗೀ ಭರತಖಂಡ ಶ್ರೇಷ್ಠಾ ॥ ಇಲ್ಲಿ ಪುಟ್ಟಿದ ಜನರಿಗೆಲ್ಲ ಸಾಧನ ಉಂಟು ಬಲ್ಲವಳೆ ನೀನು ಇದೆಲ್ಲ ಕೇಳುತ ಎನ್ನ ಸೊಲ್ಲ ಮರಿಯಲು ಬೇಡ ಫುಲ್ಲಾಕ್ಷಿ ಎನಲು ಆಗಲ್ಲೆ ನುಡಿದಳು ರಾಜವಲ್ಲಭೆಯು ತಾನು ॥ ೩೪ ॥

### ರಾಗ ಶಂಕರಾಭರಣ, ಆದಿತಾಳ.

ಹರುಷವಾಯಿತಮ್ಮ ನಿನ್ನ ಸರಸ ಮಾತು ಕೇಳಿ ಮುನ್ನ ಮರಿಯಲ್ಯಾಂಗೆ ನಿನ್ನ ಮಾತು ಯೇ ಧರ್ಮದೇವೀ ॥ ಮರವೊದುಂಟು ಅರಸರಿಗೆ ಮರೆತಾರು ಉಳಿದದ್ದು ಮರಿಯೆ ಮರಿಯಬೇಡುರಗಾದ್ರೀಶನಾಏ ಧರಣಿದೇವೀ ॥ ೧ ॥ ನಿನ್ನ ಮಾತಿನ ಹೊರ್ತು ಇಲ್ಲ ಇನ್ನು ಮೇಲಾತನಿಗೆ ನಾನು ಯೆನ್ನ ಈ ಮಗಳನ್ನ ಕೊಡುವೆ ಯೇ ಧರ್ಮದೇವೀ ॥ ನಿನ್ನ ಮಾತು ಸತ್ಯವೆಂದು ಮುನ್ನ ನಾ ತಿಳಿಯೋದು ಹ್ಯಾಂಗೆ ಯೆನ್ನಾಣೆ ಕೊಟ್ಟರೆ ಸತ್ಯ ನೀ ಧರಣಿದೇವೀ ॥ ೨ ॥ ನಿನ್ನಾಣೆ ಯೆನ್ನಾಣೆ ಮತ್ತೆ ಯೆನ್ನ ಮಗಳಾಣೆಯು ಕೊಡುವೆ ಇನ್ನು ಮೇಲೊಳಿತೆನ್ನ ನೀನು ಯೇ ಧರ್ಮದೇವೀ ॥ ಮುನ್ನಾತನಿಗೆ ಕೊಟ್ಟರೊಳಿತು ನಿನ್ನ ಈ ಮಗಳಿಗೆ ವಳಿತು ಮುನ್ನ ಎಲ್ಲರೀಗೆ ವಳಿತು ಯೇ ಧರಣಿದೇವೀ ॥ ೩ ॥ ಸಂದೇಹವ್ಯಾಕಮ್ಮ ಯೆಲ್ಲಮುಂದೀಮನಸು ತಿಳಿಯಬಲ್ಲಿ ಚಂದಾಗೆನ್ನ ಮನಸು ಅರಿಯೆಯೇ ಧರ್ಮದೇವೀ ॥ ಇಂದು ನಿನ್ನ ಮಾತಿಗೆ ಆನಂದವಾಯಿತಮ್ಮ ಎನಗೆ ಮುಂದಿನ್ನು ನಾ ಹೋಗಿ ಬರುವೆ ಯೇ ಧರಣಿದೇವೀ ॥ ೪ ॥ ಹೋಗಿ ನೀ ಬಾರಮ್ಮ ನಿನಗೆ ಬಾಗಿ ನಾ ನಮಿಸುವೆನು ಚನ್ನಾಗಿರಲಿ ನಿನ್ನ ದಯವು ಯೇ ಧರ್ಮದೇವೀ ॥ ಆಗೆಲ್ಲಾನು ಕೊಂಡು ತಾ ಬೆನ್ನಿಗೆ ಆ ಕೂಸಿನ ಕಟ್ಟಿ ಸಾಗಿದಳಾನಂತಾದ್ರಿಗೆ ಆ ಧರ್ಮದೇವೀ ॥ ೫ ॥

### ವಚನ.

ಈ ರೀತಿ ಲೌಕಿಕಾಚಾರಗಳು ಮಾಡುತಿಹ ಚಾರು ವೆಂಕಟಪತಿಯ ಚಾರು ಕೊರವಂಜಿ ಕಥೆ ಆರು ಭಕ್ತಿಯಲಿ ಸಂಪೂರ್ಣ ಕೇಳ್ವರು ಅವರ ಘೋರಸಂಕಟವು ಪರಿಹಾರ ತಾ ಮಾಡಿ ಶುಭತೋರಿ ಮುಂದಾಗ್ಯವರ ಕಾರ್ಯ ಮಾಡುವ ಸಕಲ ಕಾರ್ಯಗಳು ಬಿಟ್ಟು ॥ ಊರ್ವಿಯಲಿ ಬಹು ರಮ್ಯ ತೋರುವಾನಂತಾಖ್ಯ ಸಾರಗಿರಿಯಲ್ಲಿದ್ದು ಆರಿಗಾದರು



ಒಳಗೆ ಪ್ರೇರಕನು ಆಗಿ ವ್ಯಾಪಾರಮಾಡಿಸುತಿಹ ಅಪಾರಮಹಿಮನ ದಯದಿ ಪೂರ ಮುಗಿಯಿತು ಇಲ್ಲಿಗಾರು ಅಧ್ಯಾಯಾ ॥ ೧ ॥

### ಆರನೆಯ ಅಧ್ಯಾಯವು ಸಂಪೂರ್ಣವು.

॥ ಶ್ರೀನಿವಾಸಾಯ ನಮಃ ॥

## ಏಳನೆಯ ಅಧ್ಯಾಯವು.

ಜ್ಞಾಪಿತೋ ಬಕುಲಾವಾಕ್ಯಾಚ್ಛುಕಜೀವಾನುಮೋದಿತಃ ।
ಭೂಪೇನ ನಿಶ್ಚಿತಃ ಪಾಯಾದ್ವಿವಾಹಾಯ ವರೋ ಹರಿಃ ॥

### ವಚನ.

ತಿರುಗಿಹೋಗಲು ಕೊರವಿ ತಿರುತಿರುಗಿ ನೋಡುತಲೆ ಅರಸಿ ತನ್ನ ತೊಡೆಯಲ್ಲಿರುವ ಆ ಮಗಳ ಮುಂಗುರುಳ ತೀಡುತಲೆ ಈ ಪರಿಯು ಮಾತಾಡಿದಳು ಕೊರವಿ ಆಡಿದ ಮಾತು ಖರೆ ಯೇನು ಎನ್ನ ಮಾತಿನ ರಗಿಳಿಯೆ ನೀನು ॥ ಅರಸಿ ಮಾತಿಗೆ ಬಾಯ ತೆರದು ಮಾತಾಡದಲೆ ಪರಮ ಗಂಭೀರಳಾಗಿರುವ ಪದ್ಮಾವತಿಯು ಪರಮ ಮನಸಿನ ಭಾವ ಹೊರಘೊರಡಬೇಕೆಂದು ಕರಪಿಡಿದು ಏಕಾಂತದಲಿ ಕೇಳಿದಳಾಗ ಪರವಃ ಅಂತಃಕರಣ ಪರವಶಳು ಆಗೀ ॥ ೧ ॥

### ರಾಗ ಭೈರವಿ, ಅಟತಾಳ.

ಆತಗೆ ನಾ ಕೊಡಲ್ಯೋ । ನಿನ್ನನು ಮತ್ತೊ । ಬ್ಯಾತಗೆ ನಾ ಕೊಡಲ್ಯೋ ॥ ಪ್ರೀತಿಮಗಳೆ ನಿನ್ನ ಮಾತಿನ ಹೊರ್ತಿಲ್ಲ । ಖ್ಯಾತೀಶ್ರೀ ವೆಂಕಟನಾಥ ಯೆಂದೆನಿಪಗೆ ॥ ಪಲ್ಲ ॥ ಅರಸಿಗೆ ಪೇಳಲ್ಯೋ । ನಾ ಬಲ್ಲಂಥಾ । ಹಿರಿಯರ ಕೇಳಲ್ಯೋ ॥ ಕೊರವಿ ಮಾತೇನೆಂದು ಭರವಸ


Rarest Archiver

ಹಿಡಿಯದೆ। ಸರಿ ಬಂದವರ ನೋಡಿ ಕಳುಹಲ್ಯೋ ॥ ೧ ॥ ಏಕೋ ಭಾವದಲಿರಲ್ಯೋ । ಮತ್ತು ಅ । ನೇಕ ಮಂದಿಯ ಕೇಳಲ್ಯೋ ॥ ಜೋಕೇಲಿ ಬಹುಕಾಲ ಸಾಕಿದ ಗಿಳಿಯನು । ನಾ ಕೊಡಲಾರದೆ ಜರಿಯಲ್ಯೋ ॥ ೨ ॥ ಚಿತ್ತದ ಚಾಪಲ್ಯವೋ । ನೀ ಹೋದದ್ದು । ಮಿತ್ರೇರ ಸಂಗತಿಯೋ॥ ಉತ್ತುಮನಂತಾದ್ರಿ ಸಕ್ತನ ಕಂಡದ್ದು। ಸತ್ಯವೋ ಅದು ಮಿಥ್ಯವೋ ॥ ೩ ॥

### ವಚನ.

ಜನನಿಮಾತಿಗೆ ಜಗಜ್ಜನನಿ ನುಡಿದಳು ಕಾಮಜನಕನ ಸ್ಮರಿಸುತಲೆ ಜನನಿ ನೀ ಕೇಳಮ್ಮ ಮನಸಿನಾ ಭಾವವನು ಜನರ ಮುಂದ್ಹೇಳುವದಕನುಮಾನ ಮಾಡಿದೆನು ಅನುತಾಪದಿಂದಾ ॥ ತನಗೆ ಬಂದುದು ತಾನೆ ಅನುಭೋಗಿಸದೆ ಉಳಿದ ಜನರಿಗ್ಹೇಳಿದರೇನು ಘನವಾಗಿ ಅಪಹಾಸ್ಯವನು ಮಾಡಿ ನಗುವರು ಜನರು ಬಲ್ಲರೆ ಒಬ್ಬರ ನೋವುತನಗೆಂಬುವದು ಎನಗೆ ಹಿತಕಳು ನೀನು ನಿನ್ನ ಮುಂದೆ ಪೇಳುವದಕನುಮಾನವ್ಯಾಕೆ ॥ ೧ ॥

### ರಾಗ ನೀಲಾಂಬರಿ, ಬಿಲಂದಿತಾಳ.

ಅವನೇ ಪತಿ ಯೆನ್ನವ್ವನೆ ನೀ ಕೇಳು । ಅವನ ಸರಿಯಿಲ್ಲವನಿಯೊಳಗೆ ॥ ಅವನ ಹೊರತೆನ್ನ ಜೀವನ ನಿಲ್ಲದು । ಅವನೇ ಜಗಜ್ಜೀವನನೇ ॥ ಪಲ್ಲ ॥ ಮಂಜುಗಾನೆಯೆ ಕೊರವಂಜಿಯು ಆಡಿದ ಮಂಜುಳ ಮಾತಿಗೆ ರಂಜನವಾಯಿತು । ಕಂಜಾಕ್ಷಿ ನೀ ಯೆನ್ನ ಕಂಜನಾಭನ ಪಾದಕಂಜಕೆ ಅರ್ಪಿಸು ಅಂಜದಲೆ॥ ಪಂಜರದ ಗಿಳಿ ಪಂಜರ ಬಿಟ್ಟನ್ಯ ಪಂಜರಕ್ಹೋಗಲು ಅಂಜುವದ್ಯಾಕಮ್ಮ। ಅಂಜನಾದ್ರೀಶಗೆ ಅಂಜಲು ಬೇಡ ನಿರಂಜನನೆ ಭಯಭಂಜನನೆ ॥ ೧ ॥ ಆಟದ ಗೆಳತಿಯರಾಟಕೆ ಮೆಚ್ಚಿ ನಾ ನೀಟಾಗಿ ಹೂವಿನ ತೋಟಕೆ ಪೋಗಲು । ನೋಟದಿ ನೋಡ್ಯವನಾಟವು ಬಲ್ಲೆನು ಊಟವು ಚಿತ್ತ ಪಲ್ಲಟವಾಗೀ ॥ ಆಟದಿಂದಾನಂತಕೋಟಿ ಬ್ರಹ್ಮಾಂಡವ ನೀಟಾಗಿ ನಿರ್ಮಿಸಿ ಆಟವ ಮಾಡುವ।



ನೀಟಾಗಿ ದಾರವನಾಟವ ಬಲ್ಲರು ಚಾಟಕಕಪಟನಾಟಕನೇ ॥ ೨ ॥ ಬಲ್ಲೆನಾತನ ಕಂಠದಲಿ ಕೌಸ್ತುಭಮಾಲೆ ಎಲ್ಲಾ ಭೂಷಣ ಉರದಲ್ಲಿ ಶ್ರೀವತ್ಸವು । ಚಲ್ವಿಕೆ ನೋಡಲು ಪಲ್ಲಜ್ಯೋತಿಗಳವನಲ್ಲಿ ನಿವಾಳಿಸಿ ಚಲ್ಲುವದೂ ॥ ಅಲ್ಲೆ ಇಲ್ಲೆಂದು ಮತ್ತಲ್ಲೆ ಹಂಬಲಿಸದೆ ಅಲ್ಲವಗರ್ಪಿಸು ಆಹ್ಲಾದದಿಂದಲ್ಲೇ । ಬಲ್ಲಿದಾನಂತಾದ್ರಿಯಲ್ಲಿರುವ ಎನ್ನೊಲ್ಲಭನೆ ಪ್ರಾಣದೊಲ್ಲಭನೇ ॥ ೩ ॥

### ವಚನ.

ಮಗಳ ಮಾತಿಗೆ ತಾಯಿ ಮುಗುಳುನಗೆ ನಗುತಲೆ ಮಗಳಿಗೆಂದಳು ಎನ್ನ ಮಗಳೆ ನಿನ್ನ ನುಡಿ ಕೇಳಿ ಮುಗಳ ಮುಟ್ಟಿತು ಜೀವನಗಿಯಲ್ಲ ನಾ ನಿನ್ನ ಜಗದೀಶಗರ್ಪಿಸುವೆ ಲಗಬಗಿಯ ಮಾಡೀ ॥ ಗಗನರಾಜನ ರಾಣಿ ಮಗಳ ಮುಂದ್ಹೀಗೆ ಮಾತುಗಳಾಡುತಿರಲಾಗಿ ಸುಗುಣಿ ಬಕುಲಾವತಿಯು ಅಗಜೇಶನ ಅಭಿಷೇಕ ಮುಗಿಸಿ ಬರುವರ ಕೂಡಿ ಸೊಗಸದಲಿ ಕುದುರೆಯನು ಜಿಗಿಸುತಲೆ ಬಂದಳಾ ಆಗಸಿಯೊಳಗೆ॥ ೧॥ ಭರದಿಂದ ಬೀದಿಯಲಿ ಬರುವ ಬಕುಲಾವತಿಯ ಹೊರಳಿ ನೋಡಿದಳರಸಿ ಎರಳೆ ನೋಟಗಳಿಂದ ಬರುವಳಿವಳ್ಯಾರೆಂದು ಕೊರವಿ ಹೇಳಿದ ಗುರುತ ಸ್ಮರಿಸಿ ತಾ ಇದ್ದಲ್ಲೆ ಕರಸಿದಳು ಬೇಗ ॥ ಸರಸಿಜಾಕ್ಷಿಯೆ ಬಾರೆ ಸರಸವಾಯಿತು ಯೆಂದು ಸುರಸಿ ಅಮೃತದ ವಾಣಿ ಬೆರಸಿ ಸ್ನೇಹವು ಮತ್ತೆ ತರಿಸಿ ರತ್ನದ ಪೀಠ ಇರಿಸಿ ಕೂಡೆಂದು ಕುಳ್ಳಿರಿಸಿ ಕೇಳಿದಳಾಗ ಹರುಷದಿಂದಾ ॥ ೨ ॥

### ರಾಗ ಗೌರಿ, ಅಟತಾಳ.

ಲಲನೆ ನೀ ದಾರಮ್ಮ ಹೆಸರೇನು ॥ ಶೇಷಾ । ಚಲವಾಸಿ ಬಕುಲಾವತಿ ನಾನೂ ॥ ಎಲ್ಲಿಗ್ಹೋಗುವಿ ಮುಂದಕೆ ನೀನು ॥ ತಿಳಿ । ಇಲ್ಲಿಗೆ ಬಂದೆ ನೇಮಿಸಿ ನಾನೂ ॥ ೨ ॥ ನಿನ್ನ ಮನದ ಕಾರ್ಯಗಳೇನು ॥ ಮುಖ್ಯ । ಕನ್ಯಾರ್ಥಿಯಾಗಿ ಬಂದೆನು ನಾನೂ ॥ ೩ ॥ ದಾವಾತ ವರನಾಗಿರುವನು ॥ ದಿವ್ಯ । ದೇವಯೆಂದೆನಿಸುವ ತಿಳಿ ನೀನೂ ॥ ೪ ॥



Rarest Archiver

ಕೃಷ್ಣವೇಣಿಯೆ ಅವನ್ನೆ ಸರೇನು॥ ಕೃಷ್ಣನೆಂದೆನಿಸುವ ತಿಳಿ ನೀನು ॥೫॥
ತಾಯಿತಂದೆಗಳೆಂಬುವರಾರು ॥ ತಿಳಿ। ದೇವಕಿ ವಸುದೇವರು ಅವರು ॥
॥ ೬ ॥ ಚಂದಾಗಿ ಕುಲದಾವದ್ಹೇಳವ್ಮಾ॥ ಶುಭ । ಚಂದ್ರಮನ ಕುಲ
ಕೇಳವ್ಮಾ॥ ೭ ॥ ಶ್ರೇಷ್ಮವಾಗಿಹ ಗೋತ್ರ ದಾವದು ॥ ವಾ । ಸಿಷ್ಮನಾ
ಮಕವಾಗಿರುತಿಹುದೂ ॥ ೮ ॥ ನಕ್ಷತ್ರ ಪೇಳು ಪನ್ನಗವೇಣೀ॥ ಶ್ರವಣ।
ನಕ್ಷತ್ರ ತಿಳಿ ರಾಜನ ರಾಣೀ ॥ ೯ ॥ ವಿದ್ಯೆಯಿಂದಲಿ ಹ್ಯಾಂಗಿರುವವಾ ॥
ಬ್ರಹ್ಮ । ವಿದ್ಯೆಯಿಂದಲಿ ಗಮ್ಯ ಯೆನಿಸುವಾ ॥ ೧೦ ॥ ಧನವಂತನೆ
ನಮ್ಮ ಗುಣನಿಧಿಯೇ ॥ ಬಹು । ಧನವಂತರಾಗುವರವನಿಂದೇ ॥ ೧೧ ॥
ಕಣ್ಣು ಮೂಗಿಲೆ ಹ್ಯಾಂಗಿರುವವಾ ॥ ಕೋಟಿ । ಮನ್ಮಥ ಲಾವಣ್ಯ
ಯೆನಿಸುವಾ ॥ ೧೨ ॥ ಹೆಣ್ಣಿನ ಮನಸಿಗೆ ಬಂದೀತೆ ॥ ಅವನ । ಕಣ್ಣಿಲಿ
ಕಂಡರೆ ತಿಳಿದೀತೇ ॥ ೧೩ ॥ ಆದಾವು ದಿವಸೆಷ್ಟು ಪೇಳವ್ಮಾ ॥ ಇಪ್ಪ ।
ತ್ತೈದರ ಮೇಲಿಲ್ಲ ತಿಳಿಯವ್ಮಾ ॥ ೧೪ ॥ ಚಿಕ್ಕಂದು ಮದುವೆ ಇಲ್ಯಾ
ಕವ್ಮಾ॥ ಅವನ । ತಕ್ಕ ಹೆಂಡತಿ ಇರುತಿಹಳವ್ಮಾ॥ ೧೫ ॥ ಮುಖ್ಯಳಿ
ರಲು ಮದುವ್ಯಾಕವ್ಮಾ॥ ತಿಳಿ । ಮಕ್ಕಳಿಲ್ಲದ ಕಾರಣವವ್ಮಾ॥ ೧೬ ॥
ನೇಮದಿಂದಿರುತಿಹ ತಾನೆಲ್ಲಿ॥ ತಿಳಿ । ಶ್ರೀಮದನಂತಾದ್ರಿಯಲ್ಲೀ ॥ ೧೭ ॥

## ರಾಗ ಯುರಕಲಕಾಂಬೋಧಿ, ಬಿಲಂದಿತಾಳ.

ಇಂಥಾ ಮಾತನು ಕೇಳಿ ಸಂತೋಷದಿಂದಲ್ಲೆ। ಕಾಂತನ ಮುಂದ್ಹೇಳಿದಳೇಕಾಂತದಲಿ ಅರಸೀ ॥ ಕಾಂತ ನೀ ಇನ್ನು ಮೇಲೆ ಅಂತರಂಗದೊಳು । ಚಿಂತೆಮಾಡಲು ಬೇಡ ಕೇಳು ಸಂತೋಷದ ಸುದ್ದೀ ॥ ೧ ॥ ನರನಾರಾಯಣರೆಲ್ಲಿ ಇರುವರೊ ಅಲ್ಲಿಂದೊಬ್ಬಳು। ಕೊರವಿ ಬಂದಿದ್ದಳು ನಮ್ಮರಮನೆ ಒಳಗಾಗೀ ॥ ಜ್ವರತಾಪದಿಂದಲ್ಲೆ ಮರುಗುತ ಮಲಗಿದ ಮಗಳು । ಜ್ವರಹೋಗೆ ಯೆದ್ದಳು ಆ ಕೊರವಿ ಕಾಲ್ಗುಣದೀ ॥ ೨ ॥ ನೋಡಿ ಈ ಪರಿ ನುಡಿದಳು ಮಾಡಿ ಶಪಥವ ಕೊರವೀ। ನಾಡ ಕೊರವಿಯರಂತೆ ಆಡಳವಳ್ಳಸಿಯೂ ॥ ಆಡುತಾಡುತ ಸಖಿಯರ ಕೂಡಿ ವನದಲಿ ಪುತ್ರಿ । ನೋಡಿದಳಂತಲೊಬ್ಬ ಪ್ರೌಢಪುರುಷನ್ನಾ ॥ ೩ ॥



ಪರವಶಳಾಗಿಹಳಂಥಾ ಪುರುಷನ ಕಾಣುತ ಪ್ರಾಕೃತ । ಪುರುಷಲ್ಲ ಕೇಳವನೆ ಪುರುಷೋತ್ತಮನಂತೇ ॥ ಜ್ವರ ಮಗಳಿಗೆ ಬಂತೆಂದು ಮರುಗಿದೆವು ನಾವೆಲ್ಲ। ಜ್ವರವಲ್ಲವದು ಕಾಮಜ್ವರವಂತೆ ಕೇಳೂ ॥ ೪ ॥ ಲೇಸಾಗ್ಯಾತನ ಕಥೆ ಚಿತ್ತೈಸಿ ಕೇಳಲು ಜ್ವರವು। ನಾಶವಾಯಿತು ಇನ್ನು ಶೇಷ ಉಳಿದಿಹುದೂ ॥ ಶೇಷಾಚಲದಲಿ ನಿತ್ಯ ನಿವಾಸಿಯೆನಿಸುವ ಅವಗೆ। ತೋಷದಿ ಕೊಟ್ಟರೆ ಜ್ವರ ನಿಶ್ಶೇಷ ಹೋಗುವದೂ ॥ ೫ ॥ ಇನ್ನೊಬ್ಬಳು ಬಂದಿಹಳು ಉನ್ನತ ತೇಜಿಯನೇರಿ। ಎನ್ನ ಮನೆಯಲ್ಲಿ ತಾ ಕನ್ಯಾರ್ಥಿಯಾಗೀ ॥ ತನ್ನಲ್ಲಿರುತಿಹ ವರನ ಚೆನ್ನಾಗಿ ಪೇಳುವೆನು । ಕಣ್ಣು ಮೂಗಿಲಿ ಚೆಲುವ ಚೆನ್ನಿಗನಂತವನೂ ॥ ೬ ॥ ಚೆನ್ನಿಗನವನ್ಯಾರೆಂದು ಚೆನ್ನಾಗಿ ಕೇಳಿದರೆ । ಚೆನ್ನಿಗಾನಂತಾದ್ರೀಶನ್ನೆ ಪೇಳುವಳೂ ॥ ನಿನ್ನ ಮಗಳಾದರು ಆತನ್ನೆ ಇಚ್ಛಿಸುವಳು । ಇನ್ಯಾತಕೆ ಸಂಶಯ ಮಾಡಿನ್ನು ಶುಭ ಶೀಘ್ರಾ ॥ ೭ ॥

## ವಚನ.

ರಂಬೆ ಆಡಿದ ಮಾತಿಗಂಬರಾಖ್ಯನು ರಾಜಸಂಭ್ರಮದಿ ಆನಂದವೆಂಬ ಬಾಷ್ಪವು ಕಣ್ಣು ತುಂಬಿ ತುಳುಕುತ ಮೈಯ ತುಂಬ ರೋಮಗಳುಬ್ಬಿ ರಂಬೆಗಾಡಿದನು ಹೀಗೆಂಬ ಮಾತುಗಳೂ ॥ ರಂಬೆ ಪೂರ್ವದ ಪುಣ್ಯವೆಂಬುವದು ಫಲಿಸಿತೆಂಬ ನಮ್ಮ ಪೂರ್ವಿಕರು ಎಂಬುವರು ಮುಕ್ತಿ ಅವಲಂಬನವ ಮಾಡಿದರು ಸಂಭ್ರಮಾಯಿತು ಬಹಳ ಗಂಭೀರಳಾದ ಮಗಳೆಂಬ ಪದ್ಮಾವತಿಯು ಅಂಬುಜೋದ್ಭವಪಿತನ ರಂಬೆಯೆನಿಸುತ ಅವನ ನಂಬಿ ಎಡದೊಡೆಯಲ್ಲಿ ತುಂಬಿ ಕುಳಿತದ್ದು ಕಣ್ಣತುಂಬ ನೋಡ್ಯೇನು ಎಂದು ಅಂಬುಜಾಕ್ಷೀ ॥ ೧ ॥ ಮಡದಿ ಮುಂದೀಪರಿಯು ನುಡಿದು ಆಕಾಶಪರಿವೃಢನು ಕ್ಲೇಶದ ಪಾಶ ಕಡುಹರ್ಷಖಡ್ಗದಲೆ ಕಡಿದು ಮಗಳಿದ್ದಲ್ಲೆ ನಡದು ಬಂದೀಪರಿಯು ಪಡಲೊಳಗೆ ಇದ್ದದ್ದು ಪಡದು ಆಡಿದನೂ ॥ ಕುಡುತಿಗಂಗಳೆ ನಿನ್ನ ನಡತೆ ನೋಡಲು ಹರುಷ ನುಡಿಯಲಾಗದು ಎನಗೆ ಹಿಡಿ ಅಭಯ ನಾ ನಿನಗೆ ಕೊಡುವೆ ನಿನ್ನೊಳು ನೀನೆ ನಿಡುಕಿ ಚಿಂತೆಲಿ ಸೊರಗಿ ಬಡವೆಯಾಗಲು ಬೇಡ ಎನ್ಹಡದಪ್ಪನೆ ನೀನು

ಬಿಡು ಮನದ ಕ್ಲೇಶಗಳು ಕಡು ಚಲ್ವ ಮೂಡಲಗಿರಿ ಒಡೆಯ ವೆಂಕಟ
ಪತಿಗೆ ಕೊಡುವೆ ನಿನ್ನಾ ॥ ೨ ॥ ಪುತ್ರಿಗೀಪರಿ ನುಡಿದು ಪುತ್ರನ ಕಳುಹಿ
ಶುಭಪತ್ರವನು ಕೊಟ್ಟು ಆಗತ್ತ ಕರೆಕಳುಹಿದನು ಅತ್ತ ಆ ಬೃಹಸ್ಪತಿಯು
ವೃತ್ರಾರಿಗುರು ಬಂದ ಪತ್ರ ಕಂಡಾಕ್ಷಣ ಧರಿತ್ರಿಯಲ್ಲೀ ॥ ಪೃಥ್ವೀಶ
ತಾನು ಬಂದಂಥ ಗುರುವಿನ ಕಂಡು ಭಕ್ತಿಂದ ನತಿಸಿ ವಿಧಿಯುಕ್ತ
ಪೂಜೆಯ ಮಾಡಿ ಯುಕ್ತ ಮಾತಾಡಿದನು ಉತ್ತಮನೆ ನೀ ಕೇಳು ಸತ್ಯ
ಪೌರೋಹಿತ್ಯ ಕೃತ್ಯ ನಿನ್ನದು ಕಡೆಗೆ ಮತ್ತು ಹಿತಕನು ನಮಗೆ ನಿತ್ಯ
ನೀನೇ ॥ ೩ ॥ ಎನ್ನ ಮಗಳಿಗೆ ಒಬ್ಬ ಘನ್ನ ವರ ಬಂದಿಹನು ಪನ್ನಗಾ
ಚಲದಲ್ಲಿ ಉನ್ನತೈಶ್ವರ್ಯಸಂಪನ್ನ ಇರುವನಂತೆ ನಿನ್ನ ಅನುಮತಿ
ಯಿಂದ ಮುನ್ನ ಮಾಡುವೆ ಮದುವೆ ಮಾನ್ಯ ಗುರುವೇ ॥ ಬಿನ್ನಹ
ನುಡಿ ಕೇಳಿ ಮುನ್ನ ಆ ಗುರು ನುಡಿದ ನಿನ್ನ ಮಾತಿಗೆ ರಾಜ ಎನ್ನ
ಮನಸಿಗೆ ಹರುಷ ಘನ್ನವಾಯಿತು ಸತ್ಯ ಇನ್ನೊಂದು ನಾ ನಿನಗೆ ಮುನ್ನ
ಪೇಳುವೆ ಕೇಳು ಚನ್ನಾಗೀ ॥ ೪ ॥ ಶೇಷಗಿರಿಯಲಿ ನಿತ್ಯವಾಸಿಯೆನಿಸುವ
ಅವನ ಆ ಸವಿಸ್ತರವೆಲ್ಲ ಲೇಸಾಗಿ ತಾ ಬಲ್ಲ ವ್ಯಾಸತನಯನು ಪಂಚ
ಕ್ರೋಶದಲಿ ಇಲ್ಲಿರುವ ವಾಸ ನಮ್ಮದು ದೂರದೇಶದಲ್ಲೀ ॥ ವ್ಯಾಸತನ
ಯನು ಅವನೆ ಶ್ರೀಶುಕಾಚಾರ್ಯ ತಿಳಿ ಲೇಸಾಗಿ ಅವಗೆ ಬಿನ್ನೈಸಿ
ಪತ್ರವ ಬರೆದು ನೀ ಶೀಘ್ರ ಕರೆಕಳಿಸು ಶೇಷಗಿರಿಯವನ ಸವಿಶೇಷ
ವೃತ್ತಾಂತ ನಿಶ್ಶೇಷ ತಿಳಿಯುವುದೂ ॥ ೫ ॥ ಪಂಡಿತನ ಮಾತು ಭೂಮಂಡ
ಲೇಶನು ಕೇಳಿ ತೊಂಡಮಾನಗೆ ಕರದು ಕೊಂಡು ನೀ ಬಾ ಎಂದ
ಕೊಂಡು ರಾಜಾಜ್ಞೆ ತಕ್ಕೊಂಡು ಶುಭಪತ್ರ ಮನಗಂಡ ರಥದಲಿ ಕೂತು
ಕೊಂಡು ಪೋಗುತ ಮುನಿಯ ಕಂಡು ಪತ್ರವ ಕೊಟ್ಟು ದಂಡವನ್ನತಿಸಿ
ಆ ತೊಂಡಮಾನನು ನಿಂತುಕೊಂಡ ವಿನಯದಲೀ ॥ ಕೊಂಡು ಪತ್ರವ
ನೋದಿಕೊಂಡು ಆಕ್ಷಣ ಮುನಿ ಕಮಂಡಲವ ಪಿಡದು ಉದ್ದಂಡ ಹರು
ಷದಲೆದ್ದು ಗಂಡೆರಳೆ ಚರ್ಮವನು ತುಂಡುಮಾಡಿದ ಹರದು ದುಂಡು
ಮಣಿಮಾಲೆ ಹರಕೊಂಡು ಕುಣಿದಾಡಿದನು ಥಂಡಥಂಡದಲೀ ॥ ೬ ॥
ಹೀಗೆಂದು ನುಡಿದ ಸರ್ವಾಂಗರೋಮಗಳುಬ್ಬಿ ಅಂಗ ಕೇಳಿ ಎನ್ನಂತ



ರಂಗಕೊಪ್ಪುವದು ಜನಸಂಘದಲಿ ನಿತ್ಯ ನಿಃಸಂಗ ಮೂರುತಿಯು ಈ
ಮಂಗಲೋತ್ಸವ ಪರಮ ಮಂಗಳಪ್ರದ ತಿಳಿ ಜಗಂಗಳಿಗೆ ಎಲ್ಲಾ ॥
ಹೀಂಗೆಂದು ತೀರ್ಥದಲಿ ಸಾಂಗ ಸ್ನಾನವ ಮಾಡಿ ಹಿಂಗದಲೆ ಹರಿಯ
ಧ್ಯಾನಂಗಳನು ತ್ವರ ಮುಗಿಸಿ ಅಂಗಜನ ಗೆದ್ದ ತನ್ನಂಗರಥವನು ಬೇಗ
ಶೃಂಗರಿಸಿದನು ಭೂಷಣಂಗಳಿಂದಾಗ ॥ ೭ ॥ ತುಂಗವಾಗಿಹ ಕೋಮ
ಲಾಂಗಕುಶಗಳ ಕೊಂಡು ಹಿಂಗದಲೆ ಹೆಣದು ಉತ್ತುಂಗ ಮುಕುಟವ
ಮಾಡಿ ಅಂಗೈಯಲೊತ್ಯುತ್ತಮಾಂಗದಲಿ ಇಟ್ಟು ಮತ್ತಾಂಗೆ ಶ್ರೀತುಳಸಿ
ಪದ್ಮಾಂಗಮಣಿಮಾಲೆಗಳ ಸಂಘ ಧರಿಸಿದನು ವ್ಯಾಸಾಂಗಜಾತಾ ॥
ಅಂಗಕ್ಕಾಕಿದನು ಶುದ್ಧಾಂಗ ಕೃಷ್ಣಾಜಿನದ ಅಂಗಿಯನು ಕೆಳಗೆ ಪಾದಾಂ
ಗಗಳ ಪರ್ಯಂತ ಹಿಂಗದಲೆ ಜ್ಞಾನೆಂಬ ತುಂಗತೇಜಿಯನೇರಿ ಸಂಗ
ರಹಿತನು ಅವನ ಸಂಗತ ನಡದ ನೃಪಮಂಗಳಾಲಯಕೇ ॥ ೮ ॥ ಬಂದ
ಶುಕಮುನಿ ಎದುರಿಂದ ಕಾಣುತಲೆದ್ದು ಮುಂದೆ ರಾಜನು ಗುರುವ
ಮುಂದೆ ಮಾಡುತ ಬೇಗ ಬಂದು ಎದುರಿಗೆ ಭಕ್ತಿಯಿಂದ ವಂದನೆಮಾಡಿ
ಮಂದಿರಕೆ ಕರೆದು ವಿಧಿಯಿಂದ ಪೂಜಿಸುತ ಹೀಗೆಂದನಾಗ ॥ ಚಂದಾಗಿ
ಸೌಂದರ್ಯದಿಂದಿದ್ದ ಮಗಳನ್ನ ಮುಂದೆ ವೆಂಕಟಪತಿಗೆ ಚಂದಾಗಿ
ವೇದವಿಧಿಯಿಂದ ಕೊಡಬೇಕು ಎಂತೆಂದು ಮಾಡಿದೆ ನಾನು ಇಂದು
ಎನ್ನ ಮನದಲ್ಲಿ ಮುಂದೆ ನಿಮ್ಮುಭಯತರ ಚಂದಾಗಿ ಮನಸಿಗೆ ಬಂದರೆ
ಕೊಡುವೆ ॥ ೯ ॥ ಚನ್ನಾಗಿ ನುಡಿ ಕೇಳಿ ಮುನ್ನ ಶುಕಮುನಿ ನುಡಿದ
ಘನ್ನ ರಾಜನೆ ಕೇಳು ಧನ್ಯಧನ್ಯನು ನೀನು ನಿನ್ನ ಕುಲದುದ್ಧಾರ
ಮುನ್ನಾಯಿತೆಂದು ತಿಳಿ ನಿನ್ನ ಸರಿ ಮತ್ತಧಿಕ ಮುನ್ನೆಲ್ಲಿ ಇಲ್ಲ ಬಹು
ಪುಣ್ಯವಂತನು ನೀನು ಪನ್ನಗಾದ್ರೀಶ ತಾ ನಿನ್ನಳಿಯನಾದ ಮೇಲಿ
ನ್ನೇನು ಕಡಿಮೇ ॥ ಚನ್ನಾಗಿ ಈ ಕಾರ್ಯ ಎನ್ನ ಮನಸಿಗೆ ಬಂತು
ಮುನ್ನ ಸಂಶಯ ಬೇಡ ಇನ್ನು ಧೇನಿಸಬೇಡ ಇನ್ನೊಬ್ಬರನ ನೀನು
ಮುನ್ನ ಕೇಳಲು ಬೇಡ ಇನ್ನು ತಡಮಾಡಬೇಡಿನ್ನು ಶುಭ ಶೀಘ್ರಾ ॥
॥ ೧೦ ॥ ಪ್ರೌಢಮುನಿಮಾತು ಸವಿಮಾಡಿ ಕೇಳುತ ರಾಜ ಮಾಡಿ ನಮ
ನವ ಕೈಯ ಜೋಡಿಸುತ ಮತ್ತೆ ಮಾತಾಡಿದನು ಹೀಗೆ ದಯಮಾಡಿ

ವಧುವರರ್ಗಳಿಗೆ ಕೂಡಿ ಬರುವದು ಏನು ನೀವು ನೋಡಿರೆಂದೂ ॥ ಆಡಿದ ನುಡಿ ಕೇಳಿ ಗಾಡನೆ ಬೃಹಸ್ಪತಿಯು ನೋಡಿ ಬಕುಲಾವತಿಗೆ ಆಡಿದನು ಮಾತು ತ್ವರಮಾಡಿ ವರಗೋತ್ರಜನಿರೂಢ ನಕ್ಷತ್ರ ಬಿಚ್ಯಾಡು ಬಾಯಿಲೆ ಎನಲು ನೋಡಿ ಈ ಪರಿಯು ಮಾತಾಡಿದಳು ಬಕುಲಾ ॥೧೧॥

## ರಾಗ ಕಾಂಬೋಧಿ, ಅಟತಾಳ.

ಚಿತ್ತಗೊಟ್ಟು ಕೇಳಿರಿ ಗೋತ್ರ ನಕ್ಷತ್ರಗಳು ॥ ಸತ್ಯ ಶ್ರವಣೆಂಬೊ ನಕ್ಷತ್ರ । ವಾಸಿಷ್ಠಗೋತ್ರಾ ॥ ೧ ॥ ಗಗನರಾಜನು ನುಡಿದ ಮಗಳ ಜನ್ಮ ನಕ್ಷತ್ರಾ ॥ ಮೃಗಶಿರಾವೆಂಬ ನಕ್ಷತ್ರ । ಆತ್ರೇಯಗೋತ್ರಾ ॥ ೨ ॥ ಬಲ್ಲಂಥ ಆ ದೇವಗುರು ಎಲ್ಲ ಕೂಟಗಳನ್ನು ॥ ಅಲ್ಲಿ ಕೂಡಿಸಿ ನೋಡಿದ । ಮಾತನಾಡಿದಾ ॥ ೩ ॥ ನಾಡಿಕೂಟ ಕೂಡಿತು ಪ್ರೌಢರಾಜನೆ ಕೇಳು ॥ ಕೂಡಿತು ಸೂತ್ರಕೂಟವು । ಯೋನಿಕೂಟವೂ ॥ ೪ ॥ ಕೂಡಿತೆಲ್ಲ ಯೋಗವು ಮಾಡು ನಿಶ್ಚಯ ತ್ವರ। ಮಾಡಿ ಪತ್ರವ ಕಳಿಸು। ಹರಿಗೆ ತಿಳಿಸೂ ॥ ೫ ॥ ಗುರುವಿನ ಆ ಮಾತಿಗೆ ಪರಮ ಸಂಭ್ರಮದಿಂದ ॥ ಧರಿಸಿದ ಆನಂದಬಾಷ್ಪ । ಆಕಾಶಭೂಪಾ ॥ ೬ ॥ ಕಾಂತಿವುಳ್ಳ ಮಗಳನ ನಂತಾದ್ರೀಶಗೆ ಕೊಡುವೆ ॥ ನೆಂತ ನಿಶ್ಚಯ ಮಾಡಿದನು । ಪತ್ರ ಬರದನೂ ॥ ೭ ॥

## ವಚನ.

ಸಕಲಗುಣಸಂಪನ್ನ ನಿಖಿಲವ್ಯಾಪಕ ರಮಾಸುಕಳತ್ರ ಸುಕುಮಾರ ಸಕಲಮಾನ್ಯನೆ ಅಲೌಕಿಕಮೂರ್ತಿ ನೀನು ಲೌಕಿಕ ಮಾಡುವೆನು ನಾನು ಸುಖಕರಾಶೀರ್ವಾದ ಸುಖಪೂರ್ಣ ನಿನಗೆ॥ ಸಕಲರೆಲ್ಲರು ನಾವು ಸುಖದಲಿರುವದು ತಿಳಿದು ವಿಖನಸಾರ್ಚಿತ ನಿಮ್ಮ ಸಕಲ ಸುಕ್ಷೇಮಗಳು ಲಿಖಿತವಾಗಿಹ ಪತ್ರಮುಖದಿಂದ ನೀ ತಿಳಿಸಿ ಸುಖಬಡಿಸುವ ನಿಮಿತ್ತ ಸಖ ವೆಂಕಟೇಶಾ॥೧॥ ಮುಂದೆ ಪದ್ಮಾವತಿಯ ಚಂದಾಗಿ ವೇದವಿಧಿಯಿಂದ ಕೊಡುವೆನು ನಿನಗೆ ಸಂದೇಹವಿಲ್ಲ ಗೋವಿಂದ ನೀ ಸ್ವೀಕರಿಸು ಬಂದು ಇಲ್ಲಿಗೆ ನಿನ್ನ ಬಂಧುಬಾಂಧವರಿಂದ ಚಂದಾಗಿ





ಕೂಡೀ ॥ ಮುಂದೆ ವೈಶಾಖದಲಿ ಮುಂದಾಗಿ ಬರುತಿರುವ ಚಂದದ ದಶಮಿಯಲಿ ಬಂದ ಶುಕ್ರವಾರವೆಂದು ತಿಳಿ ಲಗ್ನತಿಥಿ ಮುಂದೆಲ್ಲ ವೃತ್ತಾಂತ ಚಂದಾಗಿ ನುಡಿವ ನಿನ್ನ ಮುಂದೆ ಶುಕಮುನಿಯೂ ॥ ೨ ॥ ಹೀಗೆ ಪತ್ರವ ಬರೆದು ಆಗ ಶುಕಮುನಿಯನ್ನು ಬೇಗ ಕಳುಹಿದ ರಾಜ ಹಾಗೆ ತಾ ಹರದಾರಿ ಹೋಗಿ ಬೆನ್ನುತ್ಯವಗೆ ಹೀಗೆ ಮಾತಾಡಿದನು ಹೋಗಿ ಈ ಕಾರ್ಯವನು ಬೇಗ ಮಾಡಿರಿ ನಿಮಗೆ ಬೇಕಾದ್ದು ಕೊಡುವೆ॥ ಯೋಗಿಗಳು ನಿಮಗೆ ಹೆಚ್ಚಾಗಿ ಹೇಳಲಿ ಯೇನು ನಾಗಶಯನನು ಇಲ್ಲಿ ಬೇಗ ತಾ ಬರುವಂಥ ಯೋಗ ಹ್ಯಾಗಾದೀತು ಹಾಗೆ ಮಾಡಿರಿ ಯೆನಲು ಆಗ ತಲೆದೂಗಿ ಚನ್ನಾಗಿ ಶುಕಮುನಿ ನಡೆದ ನಾಗಗಿರಿಗೇ ॥ ೩ ॥

## ರಾಗ ಶಂಕರಾಭರಣ, ಬಿಲಂದಿತಾಳ.

ಬಂದ ಮುನಿಯು ಹರಿಯು ಚಿಂತೆಯಿಂದ ಇರುತಿರೆ ॥ ಬಂದವರನ ನೋಡುತಲ್ಲೆ ಮುಂದೆ ನಿಂತಿರೆ ॥ ಪಲ್ಲ ॥ ಹೋದ ತಾಯಿ ಬರದೆ ಅತ್ತಲೆ ಪೋದಳೆನುತಿರೆ ॥ ಹೋದ ಕಾರ್ಯ ಹ್ಯಾಗೊ ಯೆಂದು ಬಾಧೆ ಪಡುತಿರೆ ॥ ೧ ॥ ಒಮ್ಮೆ ಹುತ್ತಿನೊಳಗೆ ಪೋಗಿ ಸುಮ್ಮನಿರುತಿರೆ ॥ ರಮ್ಮಿಸದಲೆ ಹೊರಗೆ ಮತ್ತೊಮ್ಮೆ ಬರುತಿರೆ ॥ ೨ ॥ ವಾರೆನೋಟದಿಂದ ದೃಷ್ಟಿ ದೂರ ಇಡುತಿರೆ ॥ ಶ್ರೀರತಾನಂತಾದ್ರೀಶ ಘೋರಪಡುತಿರೆ ॥ ೩ ॥

## ವಚನ.

ಬಂದಂಥ ಮುನಿಯ ದೂರಿಂದ ನೋಡುತ ಕೈಯ ಮುಂದಲೆಯ ಮೇಲಿಟ್ಟು ಮುಂದೆದುರಿಗ್ಹೋಗಿ ಮತ್ತೊಂದು ಮಾತಾಡದಲೆ ಇಂದಿರೇಶನು ಚಿಂತೆಯಿಂದ ಪರವಶನಾಗಿ ಅಂದನ್ಹೀಗೆ ॥ ಇಂದು ಎನ ಕಾರ್ಯ ವಿಪ್ರೇಂದ್ರ ಫಲಿಸಿತೊ ಇಲ್ಲೊ ಚಂದಾಗಿ ಬೇಗ ಯೆನ್ನ ಮುಂದೆ ನೀ ಪೇಳು ಯೆಂತೆಂದ ಮಾತಿಗೆ ಮುನಿಯು ಮಂದಹಾಸದಿ ನಕ್ಕು ಇಂದಿರೇಶನೆ ಕೇಳು ಇಂದು ನಿನ್ನ ಕಾರ್ಯಕ್ಕೆ ಸಂದೇಹವಿಲ್ಲವೆಂತೆಂದು ಪತ್ರವ ತೆಗೆದು ಮುಂದಿಟ್ಟನಾಗ ॥ ೧ ॥ ಅಚ್ಯುತನು ಆ ಪತ್ರ ಬಿಚ್ಚಿ ಓದಿದ ತಾನು ಉಚ್ಚಸ್ವರದಲಿ ಸ್ಪಷ್ಟ ಉಚ್ಚಾರವನು ಮಾಡಿ

ಉತ್ಸಾಹದಿಂದವನ ಸ್ವಚ್ಛಪಾದಕೆ ಹಣೆಯು ಹಚ್ಚಿ ನತಿಸುತ ಹರುಷ ಹೆಚ್ಚಾಗಿ ಅಪ್ಪಿ ಶ್ರೀವತ್ಸಲಾಂಛನ ನುಡಿದ ವಾತ್ಸಲ್ಯದಿಂದಾ ॥ ಹೆಚ್ಚಿನ ಮುನಿಯೆ ಎನ್ನಿಚ್ಛೆ ಪೂರೈಸಿದೆಯೊ ಮೆಚ್ಚಿದೆನು ನಾ ನಿನಗೆ ನಿಶ್ಚಯದಿ ಉಪಕಾರ ಹೆಚ್ಚು ಮಾಡಿದಿ ಇದಕೆ ಮಚ್ಛರೀರಕ್ಕಿಂತ ಹೆಚ್ಚೇನು ಕೊಡಲಿನ್ನು ತುಚ್ಛವೆಲ್ಲಾ ॥ ೨ ॥ ತಾಪಸನೆ ಯೆನ್ನ ಈ ರೂಪ ನಿಂದಿಹದು ಅಪರೂಪ ಅನ್ಯರಿಗೆಂದು ಈ ಪರಿಯು ಮಾತಾಡಿ ತಾನು ಪತ್ರವ ಬರೆದು ಆ ಪತ್ರಬೆನ್ನಿಂದೆ ಶ್ರೀಪತಿಯು ಆಕಾಶಭೂಪಗ್ನೀಗೆ ॥ ರಾಜಸಿರಿ ಸಂಪನ್ನ ರಾಜಪೂಜಿತ ವಿಯದ್ರಾಜ ನಿನಗೊಂದಿಸುವೆ ರಾಜಿಸುವ ಪತ್ರ ಮುನಿರಾಜ ತಂದಿತ್ತ ಈ ವ್ಯಾಜದಿಂದ್ಹರುಷ ಉತ್ತೇಜವಾಯಿತು ಮಹಾರಾಜ ಎನಗೇ ॥ ೩ ॥ ಸುದ್ದಿ ತಿಳಿ ಕ್ಷೇಮದಿಂದಿದ್ದೇವೆ ಮುಂದೆ ಬರುತಿದ್ದಂಥ ವೈಶಾಖ ಶುದ್ಧ ದಶಮಿಯಲಿ ಇದ್ದ ಶುಕ್ರವಾರ ಶುದ್ಧ ಶುಭತಿಥಿಯಲ್ಲಿ ಮುದ್ದುಮುಖದವಳಾಗಿ ಇದ್ದ ನಿನ್ನ ಕನ್ನಿಕೆಯ ಶುದ್ಧ ಪಾಣಿಗ್ರಹಣ ಸಿದ್ಧಾಗಿ ಮಾಡುವೆನು ಬುದ್ಧಿಪೂರ್ವಕ ಸ್ನೇಹಬದ್ಧನಾಗೀ ॥ ಹೀಗೆ ಪತ್ರವ ಬರೆದು ಯೋಗೀಶರ ಕಳುಹಿ ನಾಗಶಯನನು ಕಂಡನಾಗ ಬಕುಲಾವತಿಯ ಬೇಗ ತಾ ಭಕ್ತಿಯಲಿ ಬಾಗಿ ನಮಿಸುತ ನುಡಿದ ಹಿಗ್ಗಿ ಬಡವಗೆ ಬಹಳ ಭಾಗ್ಯ ಬಂದಂತೆ ॥ ೪ ॥ ತಾಯಿ ನೀ ದಣಿದೆವ್ಮ ಕಾಯಕ್ಲೇಶದಿ ಎನ್ನ ಕಾರ್ಯಕ್ಕೆ ನೀ ಪೋಗಿ ಬಾಯಿಲುಪಚಾರಲ್ಲ ಪಾಯಗಳು ನೂರೆಂಟು ಬಾಯಿಲ್ಹೇಳಲುಬಹುದು ಕೈಲಿ ಮಾಡುವದಕ್ಕೆ ಆಯಾಸ ಎಷ್ಟೊ ॥ ಕಾಯಕ್ಲೇಶದಿ ನೀನು ಕಾರ್ಯ ಮಾಡಿದ್ದು ಮುನಿರಾಯ ತಿಳಿಸಿದ ಯೆನಗೆ ತಾಯಿ ಕೇಳುವೆ ನಿನ್ನ ಬಾಯಿಂದ ಯೆಂತೆನಲು ಬಾಯಿಮಾತಿಲೆ ಆಭಿಪ್ರಾಯ ನುಡಿದಳು ಅವನ ತಾಯಿ ಬಕುಲಾ ॥ ೫ ॥

### ರಾಗ ಸಾಳಂಕ, ಆದಿತಾಳ.

ದೈವವೆ ಕಾರಣಯೆಂಬೆ । ದೇವಾಧಿದೇವನೆ ನಾನು ॥ ಕೇವಲ ಪ್ರಯತ್ನದಿಂದ । ಆವ ಕಾರ್ಯಾದೀತೂ ॥ ಪಲ್ಲ ॥ ಅಚ್ಯುತ ಕೇಳಾ ದೈವ ನಿ । ನ್ನಿಚ್ಛಾಧೀನಾಗಿಹದೈಯ್ಯಾ ॥ ನಿಚ್ಚ ನಿನ್ನ ಕಾರ್ಯಕ್ಕೆ ನಾ ।



ಹೆಚ್ಚಿನವಳೇನೋ ॥ ೧ ॥ ಕೇವಲ ಯತ್ನದಿ ನಾನು । ಧಾವಿಸಿ ಪೋಗದೆ ಮುನ್ನ ॥ ದೈವಯೋಗದಿಂದ ಧರ್ಮ । ದೇವಿ ಮಾಡಿದಳೂ ॥ ೨ ॥ ಚನ್ನಿಗಾನಂತಾದ್ರೀಶ ಕೇಳು । ಚನ್ನಾಗಿ ದೈವವಿಲ್ಲದವಗೆ ॥ ಘನ್ನವಾದ ಯತ್ನದಿಂದ । ಮುನ್ನೇನು ಫಲಾ ॥ ೩ ॥

### ವಚನ.

ಕೇಳಿ ಬಕುಲಾವತಿಯು ಹೇಳಿದೀ ಮಾತು ಆ ವೇಳೆಗಾಯಿತು ಹರಿಗೆ ಬಹಳ ಸಂತೋಷ ಈ ಲೀಲೆಯನು ಆದರದಿ ಕೇಳಿದರೆ ಶುಭವಾರ್ತೆ ಕೇಳುವರು ಮುಂದಿಹದು ಬಹಳ ಸಂತೋಷಾ ॥ ಭೂಲೋಕದಲಿ ಮಂಗಳಾಲಯಾನಂತಾಖ್ಯ ಶೈಲದಲಿ ಇದ್ದು ಈ ಲೀಲೆಯಿಂದಲಿ ಜಗತ್ಪಾಲನವ ಮಾಡುವ ದಯಾಳು ನಿನ್ನ ದಯದಿಂದ ಹೇಳಿ ಮುಗಿಯಿತು ಇಲ್ಲಿಗೇಳು ಅಧ್ಯಾಯಾ ॥ ೧ ॥

### ಏಳನೆಯ ಅಧ್ಯಾಯವು ಸಂಪೂರ್ಣವು.

॥ ಕಮಲಾಪತಯೇ ನಮಃ ॥

## ಎಂಟನೆಯ ಅಧ್ಯಾಯವು.

ಸ್ವಪ್ರೇಷಿತಭುಜಂಗಾರಿಸಮಾನೀತಾಮರೋ ಹರಿಃ ।
ಮಾಯಯಾನೀಯ ಕಮಲಾಂ ಪರಿಣೀತ್ಯುನ್ಮುಖೋಽವತಾತ್ ॥

### ರಾಗ ಯರಕಲಕಾಂಬೋಧಿ, ಬಿಲಂದಿತಾಳ.

ಮುಂದಾವೆಂಕಟಪತಿಯು ಮಂದಿಯನಾ ನೋಹಿಸುತ॥ನೊಂದು ಮನದಲಿ ತಾಯಿಯ ಮುಂದೀ ಪರಿ ನುಡಿದಾ ॥ ಇಂದುಮುಖಿ ನಿನ್ನ


Rarest Archiver

ಹೊರತು ಬಂಧುಬಳಗಗಳಿಲ್ಲಾ । ಇಂದು ಯೆನಗ್ಯಾರಿಲ್ಲ ಚಂದೇನು ಮದುವೆ॥೧॥ ನಿಬ್ಬಣಕ್ಹೋಗುವರು ನಾವಿಬ್ಬರು ಇದ್ದೇವಿಲ್ಲೆ। ಇಬ್ಬರನ ಹೊರತು ಮತ್ತೊಬ್ಬರ ನಾ ಕಾಣೆ॥ ಕೊಬ್ಬಿಲೆ ಬಳ್ಳಿಯು ಹಂದರಕ್ಹಬ್ಬಿದರೆ ಅದು ಚಂದಾ। ಉಬ್ಬಿಲೆ ಬಳಗವ ಕೂಡಿದ ನಿಬ್ಬಣವು ಚಂದಾ ॥ ॥ ೨ ॥ ಅಕ್ಕರದಿಂದಲಿ ಮಂದಿ ಮಕ್ಕಳು ಇದ್ದರೆ ಚಂದಾ। ಮಿಕ್ಕದಿರಲು ಮನಸಿಗೆ ತಕ್ಕಲ್ಲವೆಂಬೇ ॥ ಅಕ್ಕರುಳ್ಳರಸಿಗೆ ತಕ್ಕಲ್ಲವಿದು ಯೆಂದು । ಮಿಕ್ಕ ಜನರೆಲ್ಲರು ನಕ್ಕಾರು ನಮಗೇ ॥ ೩ ॥ ಬಂಧು ಬಳಗಗಳಿಂದ ಚಂದಾಗಿರುವವ ರಾಜಾ। ಬಂಧುಹೀನಗೆ ಕನ್ಯಾ ಮುಂದ್ಯಾಗೆ ಕೊಡುವಾ॥ ಇಂದಿರೇಶನು ಈ ಪರಿ ಅಂದ ಮಾತನು ಕೇಳಿ। ಮಂದಹಾಸದಿ ತಾ ಹೀಗೆಂದಳು ಬಕುಳಾ ॥ ೪ ॥ ಅಂಬುಜನಾಭನೆ ವಿಶ್ವಕುಟುಂಬಿ ಯೆನಿಸುವಿ ನೀನು । ತುಂಬಿದ ಜಗದೊಳು ನಿನ್ನ ಬಳಗೆಂಬುವದು ಕಡಿಮೆ ॥ ಅಂಬುಜಭವಮುಖ ದೇವಕದಂಬಕೆ ಕಡಿಮಿಲ್ಲದನು । ಸಂಭ್ರಮದಿಂದಲೆ ಸ್ಮರಿಸು ಕುಟುಂಬವ ನಿಂದಲ್ಲೆ॥ ೫ ॥ ಲಕ್ಷ್ಮೀಪತಿ ಈ ಮಾತು ಲಕ್ಷ್ಮೆಯಿಂದಲೆ ಕೇಳಿ। ಈಕ್ಷಿಸಿ ಮನದಲಿ ಸ್ಮರಿಸಿದ ಪಕ್ಷಿಪ ಫಣಿವರನಾ॥ ಆ ಕ್ಷಣದಲಿ ಬಂದವರು ಅಪೇಕ್ಷಿಸುವರು ಆಜ್ಞೆಯನು। ಈಕ್ಷಿಸಿ ಕರುಣದಿ ನುಡಿದನು ಅಕ್ಷಯಗುಣಪೂರ್ಣಾ ॥ ೬ ॥ ಗರುಡ ನೀ ಪೋಗಯ್ಯ ತ್ವರ ಸತ್ಯಲೋಕದಲಿ । ಉರಗೇಶ ನೀ ಪೋಗೊ ವರ ಕೈಲಾಸದಲೀ॥ ಸರಸದಿ ಈ ಪರಿ ಪೇಳಿ ವರದಾನಂತಾದ್ರೀಶ। ಬರೆದನು ಮುಂದೀ ಪರಿ ಆ ಪರಮೇಷ್ಠಿಗೆ ಪತ್ರಾ ॥ ೭ ॥

### ವಚನ.

ಜೀವಜನಿಕರ ಚಿರಂಜೀವಿಯೆನಿಸುವ ಬ್ರಹ್ಮದೇವ ಮಾಡುವೆ ನಿನಗೆ ಕೇವಲಾಶೀರ್ವಾದ ನಾವು ಕ್ಷೇಮದಲಿದ್ದ ಭಾವವನು ತಿಳಕೊಂಡು ನೀವು ಕ್ಷೇಮದಲಿದ್ದ ಭಾವ ತಿಳಿಸುವದೂ॥ ಈ ವಸುಧೆಯಲಿ ಎನ್ನ ವೈವಾಹಿಕೋತ್ಸವಕೆ ಯಾವತ್ತು ಸುರರೆಲ್ಲ ಈವತ್ತೆ ಬಾಹುವದು ದೇವ ನಿನ್ನನು ಕೂಡಿ ಬಾಯ ಮಾತಿಲೆ ಉಳಿದ ಯಾವತ್ತು ವೃತ್ತಾಂತಭಾವ



ತಿಳಿಸುವ ಪಕ್ಷಿದೇವ ನಿನಗೇ॥೧॥ ಹರಿಯು ತಾ ಬೇಗ ಪರಿಯು ಶುಭ ಪತ್ರವನು ಬರೆದು ಕೈಯಲಿ ಕೊಟ್ಟು ಗರುಡನ ಕಳುಹಿದನು ವರ ಸತ್ಯ ಲೋಕಕ್ಕೆ ಸರಸಾಗಿ ತಾ ಮತ್ತೆ ಹರಗೆ ಪತ್ರ ಬರೆದು ಹರುಷದಿಂದಾ॥ ಸರಸದಲಿ ಕೈಲಾಸಗಿರಿಯಲಿರುವವ ಎನ್ನ ಪರಮ ಆಶೀರ್ವಾದ ತ್ವರ ಮಾಡಿ ನೀ ಎನ್ನ ವರ ವಿವಾಹೋತ್ಸವಕೆ ಪರಿವಾರ ಸಹಿತಾಗಿ ಬರುವದು ಅಗತ್ಯ ಉರಗಭೂಷಣ ನಿನಗೆ ಉರಗೇಶ ಪೇಳುವನು ಉಳಿದ ವೃತ್ತಾಂತಾ ॥ ೨ ॥ ಬೆಟ್ಟದೊಡೆಯನು ಹೀಗೆ ಥಟ್ಟನೆ ತಾ ಬರದು ಕೊಟ್ಟು ಕಳುಹಿದ ಸರ್ಪಶ್ರೇಷ್ಠನ ಮುಂದವನು ನೆಟ್ಟನೆ ಕೈಲಾಸಬೆಟ್ಟಕ್ಕೆ ಪೋಗುತಿರೆ ಸೃಷ್ಟಿಕರ್ತನ ಮನೆಗೆ ಮುಟ್ಟಿದನು ಗರುಡಾ॥ ಮೆಟ್ಟಿ ಗೃಹ ಸೋಪಾನವಷ್ಟು ದಾಟುತ ಮುಂದೆ ಶ್ರೇಷ್ಠರ ಸಭೆಯಲ್ಲಿ ಸೃಷ್ಟಿಕರ್ತನ ಕಂಡ ಥಟ್ಟನೆ ನತಿಸ್ಯವಗೆ ಸ್ಪಷ್ಟಾಗಿ ವೃತ್ತಾಂತವಷ್ಟು ಪೇಳುತ ಪತ್ರ ಕೊಟ್ಟನಾಗಾ॥ ೩ ॥ ಪತ್ರವನು ನೋಡಿ ವಿಧಿ ಅತ್ಯಂತ ಹರ್ಷದಲಿ ಸತ್ಯ ಲೋಕಸ್ಥ ಯಾವತ್ತು ಜನರನ ಕರಿಸಿ ಒತ್ತಿ ಮಾ[illegible]ಡಿದನು ಹೊತ್ತು ಗಳೆಯದಲೆ ಯಾವತ್ತು ಬೇಗ್ಹೊರಡೀಹೊತ್ತು ನಿಬ್ಬಣಾ ನೀನು ಪತ್ರ ಬಂದಿಹುದು ಎನ್ನುತ್ತಯ್ಯನ ಮದುವೆ ಮರ್ತ್ಯಲೋಕದಲಿ ॥ ಸತ್ಯ ಲೋಕೇಶ ಆ ಹೊತ್ತು ಈ ಪರಿ ನುಡಿದು ಹೊತ್ತುಗಳೆಯದಲೆ ಬೇಗ್ಹುತ್ತಿ ತಾ ಹಂಸವನು ಯೆತ್ತಿ ಹೊಡಿಸಿದ ಭೇರಿ ಉತ್ತುಮಾಗಿರುವ ನೌಬತ್ತು ಮೊದಲಾದ ಯಾವತ್ತು ವಾದ್ಯಗಳೆಲ್ಲ ಒತ್ತಿ ನುಡಿದವು ಕೂಡಿ ಕ್ಲೃಪ್ತ ಯಿಲ್ಲದಲೇ॥ ೪ ॥ ಪುತ್ರಪೌತ್ರರು ವರ ಕಲತ್ರ ಮೊದಲಾದವರು ಮತ್ತವನ ಬಾಂಧವರು ಹತ್ತಿಹೊಂದಿದ ಜನರು ಸುತ್ತೆಲ್ಲ ಬಳಗ ಬೆನ್ಹತ್ತಿ ಬರುತಿಹುದು ಅತ್ಯಂತ ಭೂಷಿತವಾಗಿ ಚಿತ್ತಸಂಭ್ರಮದೀ॥ ಮತ್ತವನ ಎಡಬಲಕೆ ಛತ್ರಚಾಮರದವರು ರತ್ನಘಟಿತ ಸ್ವರ್ಣಬೆತ್ತಗಳು ಪಿಡಿದವರು ಮತ್ತೆ ಮುಂಭಾಗದಲಿ ವತ್ತಿ ಹೊಗಳುವ ಭಟರು ನೃತ್ಯಗಾಯನದವರು ಸುತ್ತೆಲ್ಲ ಸೈನ್ಯ ಆ ಸತ್ಯಲೋಕವ ಹಿಡಿದು ಮತ್ತುರಗಗಿರಿತನಕ ಸತ್ಯಸಾರಾಸೇತು ಹತ್ತಿಹುದು ಬಿಡದೇ॥ ೫ ॥

## ರಾಗ ಸೌರಾಷ್ಟ್ರ, ತ್ರಿಪುಟೆತಾಳ.

ಬಾಲ ಬರಲಿಲ್ಲೆಂದು ಹರಿ ಆ ಕಾಲದಲಿ ಚಿಂತಿಸುತಲಿರುತಿರೆ । ಕೇಳಿದನು ಆಕಾಶದಲಿ ಹೆಗ್ಗಾಳಿ ಊದುವದೂ ॥ ಬಹಳ ಮಂಗಳವಾದ್ಯ ನುಡಿದವು ಕೇಳಿ ಮತ್ತದು ಮೇಲೆ ನೋಡುವ ಕಾಲದಲಿ। ಮಗ ಬಂದು ತಂದೆಯ ಕಾಲಿಗೆರಗಿದನೂ ॥ ೧ ॥ ಅಪ್ಪ ಯೇಳೆಂದವನ ಯೆಬ್ಬಿಸಿ ಅಪ್ಪಿಕೊಂಡವನಪ್ಪ ವೆಂಕಟ । ತುಪ್ಪ ಹಾಲು ಕೂಡಿದಂತಲೆ ಒಪ್ಪಿದರು ಅವರು ॥ ಸರ್ಪಶಯನನು ಮಗಗೆ ಲೌಕಿಕೊಪ್ಪುವಂಥ ಮಾತು ಪೇಳಿದ । ಅಪ್ಪನೆ ಎನ ತಾಯಿಗೊಂದಿಸು ತಪ್ಪದಲೆ ಯೆಂದೂ ॥ ೨ ॥ ತಂದೆಮಾತಿಗೆ ಕಂದ ನುಡಿದನು ಎಂದು ಇಲ್ಲದೆ ನಿನ್ನ ತಾಯಿಯು। ಬಂದಳೀಗೆಲ್ಲಿಂದ ಇಲ್ಲಿಗೆ ಚಂದದಲಿ ಪೇಳೋ ॥ ಕಂದನ ನುಡಿ ಕೇಳಿ ಹರುಷದಿ ಇಂದಿರೇಶನು ಅಂದನೀ ಪರಿ। ಹಿಂದಕೇಕೆಯು ತಿಳಿ ಯಶೋದಾ ಯೆಂದು ಕರಿಸುವಳೂ ॥ ೩ ॥ ಬಾಲಲೀಲೆಯ ನೋಡಿ ಮುಂದಿನ ಲೀಲೆಯ ನೋಡದೆ। ಮತ್ತೆ ತಾ ಈ ಕಾಲದಲಿ ಬಕುಲಾಖ್ಯಳೆನಿಸುತ ಪಾಲಿಸಿದಳೆನ್ನಾ ॥ ಬಹಳ ಸಂತೋಷದಲಿ ಶ್ರೀಹರಿ ಹೇಳಿದ ಮಾತನು ಈ ಪರಿ ಕೇಳಿ । ಅವಳಡಿಗೊಂದಿಸಿದ ಮೊಮ್ಮಗನೂ ॥ ೪ ॥ ಕಂದನ ವೃತ್ತಾಂತ ಶ್ರೀಹರಿ ಚಂದದಲಿ ಕೇಳುತಲೆ ಭೃಗುಮುನಿ । ಬಂದ ಮೊದಲಾದದ್ದು ಪೇಳಿದ ಹಿಂದಿನದ ಸುದ್ದೀ ॥ ಬಂದನಾ ಕಾಲದಲಿ ಹರುಷದಿ ನಂದಿವಾಹನದೇವ ಪಾರ್ವತಿ। ಯಿಂದ ಷಣ್ಮುಖನಿಂದ ತನ್ನವರಿಂದ ವಡಗೂಡೀ ॥ ೫ ॥ ಬಂದ ನರವಾಹನನು ಆ ಮೇಲ್ಬಂದ ಮೇಷಾರೂಢದೇವನು। ಬಂದ ಮಹಿಷಾರೂಢ ತ್ವರ ದೇವೇಂದ್ರ ತಾ ಬಂದಾ ॥ ಬಂದ ವರುಣನು ವಾಯು ಬಂದನು ಚಂದ್ರಸೂರ್ಯರು ಬಂದರಾಗಲೆ। ಸುಂದರಾಶ್ವವನೇರಿ ಮನ್ಮಥ ಬಂದ ರತಿಯಿಂದಾ ॥ ೬ ॥ ಶಿಷ್ಟ ಗೌತಮ ಕಶ್ಯಪಾತ್ರಿ ವಸಿಷ್ಠ ವಿಶ್ವಾಮಿತ್ರ ಮೊದಲಾ। ದಷ್ಟ ಮುನಿಗಳು ಬಂದರಾಗ ವಿಶಿಷ್ಟ ಉತ್ಸವಕೆ ॥ ಶ್ರೇಷ್ಠ ಗಂಧರ್ವಾಪ್ಸರರು, ಮತ್ತಷ್ಟ ನಿಬ್ಬಣ ಕೂಡಿತಾಗಲೆ । ಶ್ರೇಷ್ಠ ಶ್ರೀಮದನಂತನಾಮಕ ಬೆಟ್ಟದಲಿ ಬಂದೂ ॥ ೭ ॥



## ವಚನ.

ಬಂದವರಿಗಾದರವು ಚಂದದಿಂದಲಿ ಮಾಡಿ ಮುಂದಕೆ ಕರದು ಮುಕುಂದ ತಾ ಮುದದಿ ಹೀಗೆಂದು ಮಾತಾಡಿದನು ಬಂದಕಾರಣ ಯೆನ್ನ ಬಾಂಧವರು ನೀವು ಆನಂದ ಇಂದೆನಗೇ ॥ ಮುಂದೆ ಆಕಾಶ ನೃಪನಂದನೆಯ ಪಾಣಿ ವಿಧಿಯಿಂದ ಪಿಡಿಯಲುಬೇಕು ಯೆಂದು ಮಾಡಿದೆ ನಾನು ಚಂದಾಗಿ ನಿಮ್ಮನಕೆ ಬಂದರಿದು ಮಾಡುವೆನು ಯೆಂದ ಮಾತಿಗೆ ಯೆಲ್ಲರಂದರ್ಹರ್ಗೇ ॥ ೧ ॥ ಉತ್ತಮಾಯಿತು ಪರಮ ಉತ್ತಮೋತ್ಸವವಿದು ಅಗತ್ಯ ನೀ ಮಾಡು ಸರ್ವೋತ್ತಮನೆ ಸತ್ವರದಿ ಸತ್ಯವಿದು ನೋಡುವದು ಮತ್ತೆ ನಮಗಪರೂಪ ನಿತ್ಯ ಉತ್ಸವ ನಿನಗೆ ನಿತ್ಯ ಮಂಗಳವೇ ॥ ಸತ್ಯದಿಂದೀ ಪರಿಯ ಉತ್ತರವ ಕೇಳಿ ಪ್ರತ್ಯುತ್ತರವ ನುಡಿದ ಹರಿ ಉತ್ತಮಾಯಿತು ನಿಮ್ಮ ಚಿತ್ತಕ್ಕೆ ಬಂದ ಮೇಲ್ಮತ್ತಿನ್ನು ತಡವೇಕೆ ಹೊತ್ತುಗಳಿಯದಲೆ ಈ ಹೊತ್ತು ನಿರ್ಮಿಸಿರಿನ್ನು ಉತ್ತಮೋತ್ತಮ ಸಭೆಯು ಕ್ಲೃಪ್ತದಿಂದಿರಲಿ ಮೂವತ್ತು ಗಾವುದವೂ ॥ ೨ ॥ ಶ್ರೀಶನಪ್ಪಣೆಗೆ ಆಲಸ್ಯವನು ಮಾಡದಲೆ ಆ ಸಮಯದಲಿ ಅಲ್ಲಿ ಭಾಸುರಾಗಿರುವಂಥ ಶ್ರೀಸಭಾನಿರ್ಮಿಸಿದ ವಿಶ್ವಕರ್ಮನು ತಾನು ವಿಶ್ವವ್ಯಾಪಕನಲ್ಲಿ ವಿಶ್ವಾಸದಿಂದಾ ॥ ಆ ಸಮಯದಲಿ ಶ್ರೀನಿವಾಸ ನುಡಿದನು ಅವಗೆ ಈ ಸಮಯದಲ್ಲಿ ಆಕಾಶಪುರಕ್ಹೋಗಿ ನೀ ಈ ಸಭೆಯಗಿಂತಧಿಕ ಆ ಸಭಾ ನಿರ್ಮಾಣ ಬೇಸರಿಲ್ಲದೆ ಮಾಡು ಲೇಸಾಗೀ ॥ ೩ ॥ ಇಂದಿರಾಪತಿಯು ಹೀಗೆಂದು ಪೇಳ್ಯವನ ಮೇಲಿಂದ್ರನ ಕಳುಹಿದನು ಚಂದಾಗಿ ನೀನು ಇವನಿಂದ ಈ ಕಾರ್ಯ ತ್ವರದಿಂದ ಮಾಡಿಸು ಎಂದು ಮುಂದೆ ದೇವೇಂದ್ರ ಹರಿ ಅಂದ್ಹಾಗೆ ಮಾಡಿದನು ಒಂದು ಬಿಡದೆ ॥ ಮುಂದಷ್ಟವರ್ಗ ವಿಧಿಯಿಂದ ಮಾಡಲು ಬೇಕು ಎಂದು ಮಾತಾಡಿ ಗೋವಿಂದ ತಾ ಬಹು ವಿನಯದಿಂದ ತನ್ನ ಕಾರ್ಯಕ್ಕೆ ಮುಂದೆ ಒಬ್ಬೊಬ್ಬರಿಗೆ ಒಂದೊಂದು ನೇಮಿಸಿದ ಚಂದಾಗೀ ॥ ೪ ॥ ಸ್ಪಷ್ಟ ನುಡಿದನು ಹರಿ ವಸಿಷ್ಠಮುನಿ ನಿನ್ನದು ವಿಶಿಷ್ಟ ಪೌರೋಹಿತ್ಯ ಶ್ರೇಷ್ಠ ಷಣ್ಮುಖ ಕೇಳು ಅಷ್ಟ್ಯಾರಿಗೆ ಸನ್ಮಾನ ಕೊಟ್ಟು ಕರೆಕಳಿಸುವ ವಿಶಿಷ್ಟಕಾರ್ಯವು ನಿಂದು

ಇಷ್ಟರೊಳಗೆ ॥ ಧಿಟ್ಟ ಮನ್ಮಥ ಕೇಳು ಶಿಷ್ಟರನ ಕಾಣುತಲೆ ವಿಶಿಷ್ಟ ಪ್ರತ್ಯುತ್ಥಾನ ಕೊಟ್ಟು ಮೇಲಕ್ಕೆ ಕರೆ ತುಷ್ಟನಾಗ್ಯವರಿಗೆ ಥಟ್ಟನೆ ಆಸನವ ಕೊಟ್ಟು ಕೂಡಿಸು ನೀನು ಶ್ರೇಷ್ಠ ಶಂಕರನೇ ॥ ೫ ॥ ಕಿನ್ನರೇಶನೆ ಕೇಳು ಮುನ್ನ ಸತ್ಪಾತ್ರರಿಗೆ ಚೆನ್ನಾಗಿ ಕೊಡುವಂಥ ಎನ್ನ ಧನವಸ್ತ್ರಗಳು ನಿನ್ನ ಸ್ವಾಧೀನ ತಿಳಿ ಇನ್ನು ಚಂದ್ರಮ್ಮನೆ ಕೇಳ್ಪನ್ನತರ ದೀವಿಟಿಗೆ ಚನ್ನಾಗಿ ಪಿಡಿವದಕೆ ಚನ್ನಿಗನು ನೀನೂ ॥ ಅನ್ನಾದಿ ಪಾಕವಿದು ವಹ್ನಿ ನಿನ್ನ ಕೂಡಿಹುದು ಘನ್ನ ವರುಣನೆ ನೀರು ನಿನ್ನ ಕೂಡಿಹುದು ತಿಳಿ ಮುನ್ನ ವಸುಗಳಿರಾ ನಿಮ್ಮನ್ನ ಕೂಡಿರುವುವು ಅನ್ನಾದಿ ಭಾಂಡಗಳು ಚೆನ್ನಾಗಿ ತೊಳೆಯುವುದು ಘನ್ನ ಗ್ರಹಗಳಿರಾ ನಿಮ್ಮನ್ನ ಕೂಡಿಹುದು ದೊನ್ನೆ ಪತ್ರಾವಳಿಯು ಚೆನ್ನಾಗೀ ॥ ೬ ॥ ದುಷ್ಟರಿಗೆ ದಂಡನವು ಶಿಷ್ಟರಿಗೆ ಸನ್ಮಾನ ಬಿಟ್ಟು ಬಿಡದಲೆ ಮಾಡು ಇಷ್ಟು ನಿನ್ನದು ಯಮನೆ ಘಟ್ಟಿ ನೀ ಇದರಲ್ಲಿ ಇಷ್ಟೆಲ್ಲ ಮಾಡಿಸುವಿ ಶಿಷ್ಟ ಯಜಮಾನ ಪರಮೇಷ್ಠಿ ನೀನೂ ॥ ಇಷ್ಟು ಈಪರಿ ಪೇಳಿ ಇಷ್ಟದಾಯಕ ಹರಿಯು ಶಿಷ್ಟ ಕಾರ್ಯವ ಮತ್ತೆ ಅಷ್ಟೂಟಿಗೆ ಪೇಳಿದನು ಥಟ್ಟನೆ ಮುಂದವರು ಕಟ್ಟಿ ಟೊಂಕವ ತಮಗೆ ಕೊಟ್ಟ ಕಾರ್ಯವ ಬಿಡದೆ ದಿಟ್ಟಾಗಿ ಮಾಡುತಿರೆ ಬೆಟ್ಟದೊಡೆಯಗೆ ನುಡಿದ ಸೃಷ್ಟಿಕರ್ತಾ ॥ ೭ ॥

### ರಾಗ ಕಾಪಿ, ಅಟತಾಳ.

ಮಂಗಳಸ್ನಾನ ಮಾಡೇಳೋ। ಜಗ। ಮಂಗಲದಾಯಕ ಹರಿಯೆ ದಯಾಳೋ ॥ ಪಲ್ಲ ॥ ಸಣ್ಣನಾಮವ ಬರದಿಟ್ಟು । ಬಹು । ಬಣ್ಣದ ಕುಂಕುಮ ಮಧ್ಯದಲಿಟ್ಟು ॥ ಸಣ್ಣಿಟ್ಟು ಕಸ್ತೂರಿ ಬೊಟ್ಟು । ಮಾಡು । ಪುಣ್ಯಾಹವಾಚನ ಪೀತಾಂಬರುಟ್ಟೂ ॥ ೧ ॥ ದೇವರಿಗೊಂದನ ಮಾಡು । ಕುಲ । ದೇವತೆಸ್ಥಾಪನೆ ಮನೆಯಲ್ಲಿ ಮಾಡು ॥ ಕೇವಲ ಲೌಕಿಕ ನೋಡಿ । ಭೂ । ದೇವರಿಗೊಂದಿಸಿ ವರಗಳ ಬೇಡೂ ॥ ೨ ॥ ನಾನಾ ದೇಶದಿ ಬಂದ ಜನರು । ನಿನ್ನ । ಆನಂದೋತ್ಸವವಿದು ನೋಡೇವೆಂಬುವರು ॥ ಸ್ನಾನವಮಾಡಿಸುವ ಸೇವಕರು । ಅಚ್ಯು । ತಾನಂತಾದ್ರೀಶನೆ ಸಿದ್ಧರಾ[illegible] ॥ ೩ ॥



### ರಾಗ ನೀಲಾಂಬರಿ, ಅಟತಾಳ.

ಲೋಕನಾಯಕ ಸ್ವಾಮಿ । ವ್ಯಾಕುಲನಾದನಾಗಾ ॥ ಲೋಕರೀತಿಯು ತೋರಿದ । ಶೋಕ ಮಾಡಿದಾ ॥ ೧ ॥ ಸಿರಿಯಿಲ್ಲದೆ ಈ ಸಭೆಯು । ಸರಿಬಾರದಯ್ಯ ಬ್ರಹ್ಮಾ ॥ ಸರಸ ತೋರದು ಕಣ್ಣಿಗೆ । ಇರುವೊದು ಹ್ಯಾಗೇ ॥ ೨ ॥ ಸುರರು ನೀವೆಲ್ಲ ಯಿಲ್ಲೆ । ನೆರದು ಕುಳಿತರೇನು ॥ ಬರೆಮನೆಯಂತೆ ತೋರುವದು । ಹರುಷವಾಗದೂ ॥ ೩ ॥ ಥಳಥಳಿಸುವ ತಾರೆಗಳು । ಟಹಳದರಾಕಾಶಾ ॥ ಚೆಲುವ ಚಂದ್ರಮನಿಲ್ಲದೆ । ಶೋಭಿಸುವದೇ ॥ ೪ ॥ ಅನುದಿನಾನಂತಾದ್ರಿಯೊಳು । ನೆನಪು ಮಾಡುವೆನವಳಾ ॥ ಮನೆಯು ಯೆಂಬುವದೊಲ್ಲದು । ಮನಸು ನಿಲ್ಲದೂ ॥ ೫ ॥

### ವಚನ.

ಹರಿಯ ಶೋಕವ ಕೇಳಿ ಹರ ನುಡಿದನೀ ಪರಿಯು ಹರಿಯೆ ಇದು ಯೇನು ಈಪರಿ ವಿಡಂಬನದಿಂದ ಬರಿದೆ ಶೋಕವು ಯಾಕೆ ಸಿರಿದೇವಿ ಯೆಂಬುವಳು ಪರಮ ಚಂಚಲಳಾಕೆ ಇರುವಳಲ್ಲೊಂದು ಕಡೆ ಸ್ಮರಿಸುವ್ಯಾಕವಳ ನೀ ಸ್ಮರಮಣನಲ್ಲೇನೋ ॥ ಬರುವಳಿನ್ನೊಬ್ಬಳತಿ ಹರುಷ ಕೊಡುವಂಥ ನಿನ್ನರಸಿ ಪದ್ಮಾವತಿಯು ಸರಸಾಗಿ ಕೂಡ್ಯವಳು ಹರುಷದಿಂದಿರು ಎನಲು ಹರಿಯು ತಾ ಮನದಲ್ಲಿ ವರಮಹಾಲಕ್ಷ್ಮಿಯಳ ಮರೆಯದಲೆ ಮತ್ತೆ ಈ ಪರಿ ನುಡಿದನಾಗಾ ॥ ೧ ॥

### ರಾಗ ನೀಲಾಂಬರಿ, ಆದಿತಾಳ.

ಇರಲಾರೆನಾಕೆಯ ಹೊರತು । ಇರಲಾರೆ ॥ ಆಕೆಯ ಹೊರತು । ಯಾಕೆನ್ನ ಸುರತು । ಲೋಕಸುಂದರಿಯಳ ಮರೆತು ಮರೆತು ॥ ಪಲ್ಲ ॥ ಕಡೆ ಪ್ರಳಯದಲಿ । ಕಡು ಹರುಷದಲಿ ॥ ಬಿಡದೆ ಇರುವಳೆನ್ನ । ಬದಿಲೆ ಬದಿಲೆ ॥ ೧ ॥ ಕರವೀರದಲ್ಲೆ । ಇರುವಳಲ್ಲೆ ॥ ಬರುವಳಿನ್ಯ್ಯಾಗಿಲ್ಲೆ ಇಲ್ಲೆ ॥ ೨ ॥ ಇಂದಿಗನಂತಾದ್ರಿಯೊಳಗಂಥ । ಸುಂದರಿ ಇದ್ದರೆ ಶಾಂತ ಶಾಂತ ॥ ೩ ॥

## ವಚನ.

ಹರನ ಮುಂಧ್ವರಿಯು ಈ ಪರಿಯ ಶೋಕವ ಮಾಡಿ ತ್ವರದಿಂದ ಸೂರ್ಯನ ಕರೆದು ಪೇಳಿದನಾಗ ಸಿರಿಯ ಹೊರತಿನ್ನ ನಾ ಇರಲಾರೆ ಇರಲಾರೆ ಕರಕೊಂಡು ಬಾ ನೀನು ಕರವೀರಕ್ಹೋಗೀ ॥ ಪರಮಚಂಚಲಳಾಕೆ ಬರುವ ಬಗೆ ಹ್ಯಾಗೆಂದು ಬರಿದೆ ಧ್ಯಾನಿಸಬೇಡ ಪರಮ ಯುಕ್ತಿಯ ಕೇಳು ತ್ವರದಿ ಪೋಗುತ ಪಾದಕೆರಗಿ ಎದುರಿಗೆ ನಿಂತು ಸುರಿಸಿ ಕಣ್ಣೀರನು ವರಸುತಲೆ ನೀ ತೋರು ಪರಮದುಃಖವ ನಿನ್ನ ತ್ವರದಿ ನೋಡುವಳಾಕೆ ಕರುಣದಿಂದಲಿ ಮುಂದೆ ಕರೆದು ಕೇಳುವಳೂ ॥ ೧ ॥ ಏನಯ್ಯ ಸೂರ್ಯ ನಿನಗೇನು ಬಂತಿದು ದುಃಖ ನೀನು ಇಲ್ಲಿಗೆ ಬಂದಿ ಏನು ಕಾರಣ ಎನಲು ನೀನು ಮಾತಾಡದಕೆ ಯೇನು ಪೇಳಲಿ ದೇವಿ ನಾನು ನಿನ್ನ ಮುಂದಿನ್ನ ದೀನನಾಗೀ ॥ ಶ್ರೀನಿವಾಸನು ಬಹಳ ಕ್ಷೀಣನಾಗಿರುವ ಯೇನೇನು ಉಳದಿಲ್ಲ ತಿಳಿ ನೀನು ನೋಡಿದರಂತು ಯೇನಂದಿಯೊ ಅವನ ಧ್ಯಾನ ಇನ್ನೊಂದಿಲ್ಲ ತಾ ನಿನ್ನ ದಾವಾಗ ನೋಡೇನೆಂಬಾ ॥ ೨ ॥ ಚಂದಾಗಿ ನೀನು ಹೀಗೆಂದು ಮಾತಾಡು ತ್ವರದಿಂದ ಬರುವಳಾಕೆ ಸಂದೇಹವಿಲ್ಲ ತಿಳಿ ಅಂದ ಮಾತಿಗೆ ಸೂರ್ಯ ಮುಂದೆ ರಥದಲಿ ಕುಳಿತು ಬಂದ ಕೊಲ್ಹಾಪುರಕೆ ಚಂದಾಗಿ ಮುಂದೆ ಹರಿ ಅಂದ್ಹಾಗೆ ಮಾಡಿದನು ಒಂದು ಬಿಡದೇ ॥ ಬಂದಳಾ ಕ್ಷಣಕೆ ತ್ವರದಿಂದ ರಥವನು ಯೇರಿ ಇಂದಿರಾದೇವಿ ಗೋವಿಂದನಾಲಯದಲ್ಲಿ ಬಂದಿರುವ ತನ್ನ ಆ ಸುಂದರಿಯ ಸುದ್ದಿ ಕಿವಿಯಿಂದ ಕೇಳುತಲೆದ್ದು ಮುಂದಲ್ಲೆ ನೋಡಬೇಕೆಂದು ಹರಿ ನಡದಾ ॥ ೩ ॥ ಚಂದಾಗಿ ಆ ಶತಾನಂದ ಹೆಗಲ ಮೇಲೊಂದು ಕೈಯಿಟ್ಟು ಮತ್ತೊಂದು ಕೈಹಾಕಿದನು ಚಂದ್ರಶೇಖರನಲ್ಲಿ ಒಂದೊಂದೆ ಹೆಜ್ಜೆಯನು ಮುಂದಕ್ಕೆ ಸರಿಸಿಟ್ಟು ಮಂದಗತಿಯನು ತೋರಿ ಮಂದಿಯರ ಮೋಹಿಸುತ ಬಂದನೆದುರಿಗೆ ರೋಗದಿಂದಿರುವನಂತೇ ॥ ಮುಂದೆದುರಿಗೀ ರೀತಿಯಿಂದ ಬರುತಿರುವ ಗೋವಿಂದನ ಕಂಡು ತ್ವರದಿಂದ ರಥವನು ಇಳಿದು ಇಂದಿರಾದೇವಿ ತಾ ಮಂದಹಾಸದಿ ನಗುತ ಬಂದು ಆತನ ಪಾದಕೊಂದಿಸುತ ಪರಮ ಆನಂದದಿಂದಪ್ಪಿ ಬಹು ಚಂದ ತೋರಿದಳಾಗ ಇಂದ್ರ



ನೀಲದ ಮಣಿಗೆ ಕುಂದಣಿಟ್ಟಂತೇ ॥ ೪ ॥ ಪಟ್ಟದರಸಿಯ ಕೂಡಿ ಗಟ್ಟಿ ಆಲಿಂಗನದಿ ಪುಷ್ಟನಾದನು ಆಗ ವಿಷ್ಟರಶ್ರವ ತಾನು ಗಟ್ಯವಳ ಕೈಪಿಡಿದು ಥಟ್ಟನೆ ಕರಕೊಂಡು ಪಟ್ಟದಾಸನದಲ್ಲಿ ದಿಟ್ಟಾಗಿ ಕುಳಿತಾ ॥ ಸ್ಪಷ್ಟ ನುಡಿದನು ತನ್ನ ಅಷ್ಟು ವೃತ್ತಾಂತವನು ಬಿಟ್ಟು ಬಿಡದಲೆ ಆಕೆ ಬಿಟ್ಟು ಹೋದದ್ಹಿಡಿದು ಅಷ್ಟು ಕೇಳುತಲ್ಯವನ ದಿಟ್ಟಿಸಿ ನೋಡುತಲೆ ದಿಟ್ಟೆ ಮಾತಾಡಿದಳು ಡಿಟ್ಟತನದಲ್ಲೀ ॥ ೫ ॥

### ರಾಗ ಸಾರಂಗ, ಬಿಲಂದಿತಾಳ.

ಎಂಥಾ ನಡತೆ ನಿಂದು । ನಾ । ಪ್ರಾಂತಗಾಣೆನಿಂದು ॥ ಹರಿ ॥ ಎಂಥಾ ನಡತೆ ನಿಂದು ॥ ಪಲ್ಲ ॥ ಎಂಥಾ ನಡತೆ ಕಾಂತ ನಿ । ನ್ನಂಥ ಕಪಟವಂತರಿಲ್ಲ ॥ ಅಂತರಂಗದಿ ಚಿಂತಿಸಿದರೆ । ಎಂಥವರಿಗು ಅಂತ ತಿಳಿಯದು ॥ ಅನುಪಲ್ಲ ॥ ಎನ್ನ ಬಿಟ್ಟು ಅನ್ಯಳಲ್ಲಿ । ನಿನ್ನ ಚಿತ್ತವನ್ನು ಇಟ್ಟು ॥ ಮುನ್ನ ಲಜ್ಜೆಯನ್ನ ಬಿಟ್ಟು । ಎನ್ನ ಕರೆವುದಿನ್ನ ಯಾಕೆ ॥ ॥ ೧ ॥ ಹರಿಯು ಬಹಳ ಸೊರಗಿ । ಇರುವನೆಂಬ ಪರಿಯ ತಿಳಿಸಿ ॥ ಕರಿಯೊ ಭಾಸ್ಕರನೆ ಎಂದು । ತ್ವರದಿ ಎನ್ನ ಕರೆಯಕಳಿಸಿದಿ ॥ ೨ ॥ ಪಟ್ಟದರಸಿ ಬಿಟ್ಟು ನಿಂತು । ಬೆಟ್ಟದಲ್ಲಿ ಸ್ಪಷ್ಟ ನೀನು ॥ ಇಷ್ಟು ಘಟ್ಟಿ ಮುಟ್ಟು ಇರಲು । ಎಷ್ಟು ಸುಳ್ಳು ಹುಟ್ಟಿಸಿದಿಯೋ ॥ ೩ ॥

### ರಾಗ ಭೈರವಿ, ಆದಿತಾಳ.

ಪಟ್ಟದರಸಿಯ ಮಾತಿಗಾಗಿ ಗೋವಿಂದ ಸ್ನೇಹ । ಇಟ್ಟು ಮಾತಾಡಿದ ಚಂದವಾಗೀ ॥ ಸಿಟ್ಟು ಮಾಡಬೇಡ ಪ್ರಾಣಕಾಂತೆ ನಾ ನಿನ್ನ ಕೊರಳ । ಮುಟ್ಟಿ ಹೇಳುವೆನು ಮನದಂತೇ ॥ ೧ ॥ ಹಿಂದಕ್ಕೆ ಆ ತ್ರೇತಾಯುಗದಲ್ಲೆ । ನೀ ಅಂದ ಮಾತು ಚಂದವಾಗಿ ಸ್ಮರಿಸು ಮನದಲ್ಲೆ ॥ ಸುಂದರಿ ಆ ವೇದವತಿ ಇಲ್ಲೆ । ಪದ್ಮಿನಿಯಾಗಿ ಬಂದಿಹಳು ಕಲಿಯುಗದಲ್ಲೆ ॥ ೨ ॥ ಪ್ರೌಢೆ ಕೇಳು ನಿನ್ನ ಮಾತಿನಿಂದೆ । ಅವಳ ಮದುವೆಮಾಡಿಕೊಂಬೆ ನಿನ್ನ ಸಾಕ್ಷಿಯಿಂದೇ ॥ ರೂಢಿಲಿ ಬರುವಳಲ್ಲವೆಂದು । ತಿಳಿದು ಸುಳ್ಳಾಡಿ ಕರೆಕಳಿಸಿದೆನಿಂದು ॥ ೩ ॥ ಆಡಿದ ಮಾತಿಗೆ ಹರುಷಬಟ್ಟು ।


Rarest Archiver

ಲಕುಮಿ ಮಾತಾಡಿದಳು ಮತ್ಸರವ ಬಿಟ್ಟು ॥ ಮಾಡಿಕೊ ಮದುವೆ ಬೇಗಿನ್ನು । ಗೋವಿಂದ ತಡಮಾಡದೆ ಉದ್ಯೋಗ ಮಾಡು ಮುನ್ನ ॥ ॥ ೪ ॥ ಎನ್ನ ಮಾತು ಸತ್ಯಮಾಡು ಯೆಂದು । ಲಕುಮಿ ಅವನ ಬಣ್ಣಿಸಿ ಕೈಪಿಡಿದಳು ಬಂದು ॥ ಚೆನ್ನಾಗಿ ಅನಂತಗಿರಿಯಲ್ಲೆ । ಇಬ್ಬರಿಗೆ ಹಾಲು ಹಣ್ಣು ಕೂಡಿದಂತಾಯಿತು ಅಲ್ಲೆ ॥ ೫ ॥

### ವಚನ.

ಎಂಟು ಮದ ಬಿಟ್ಟು ಎನ್ನ ಕಂಠದಿಂದ್ಹೊರಟ ವೈಕುಂಠಪತಿ ಲೀಲೆಯಿದು ಕುಂಠಿತಾಗದಲೆ ಉತ್ಕಂಠದಲಿ ಕೇಳಿದಡೆ ಕಂಟಕವ ತೆಗೆದು ಉತ್ಕಂಠದಿಂದಿಲ್ಲೆ ಹೊಂಟುಬರುವಳು ಲಕುಮಿ ಗಂಟುಪದರಲ್ಲೇ ॥ ಎಂಟು ಐಶ್ವರ್ಯಗಳು ಉಂಟೆನಂತಾದ್ರಿಯಲಿ ಹೊಂಟುಬಂದಿಲ್ಲೆ ನೂರೆಂಟು ವಿಘ್ನಗಳೆಂಬ ಕಂಟಕವ ಹರಿಸಿ ಯೆನ್ನ ಕಂಠದಲಿ ನಿಂತು ವೈಕುಂಠಪತಿ ಮುಗಿಸಿದಿಲ್ಲೆಂಟು ಅಧ್ಯಾಯಾ ॥ ೧ ॥

**ಎಂಟನೆಯ ಅಧ್ಯಾಯವು ಸಂಪೂರ್ಣವು.**





॥ ಲಕ್ಷ್ಮೀಪತಯೇ ನಮಃ ॥

# ಒಂಭತ್ತನೆಯ ಅಧ್ಯಾಯವು.

**ಶ್ರೀವಾಣೀಭಾರತೀಗೌರೀಶಚೀಭಿಃ ಸ್ನಾಪಿತೋಽವತಾತ್ ।**
**ಕುಬೇರಾಲ್ಲಬ್ಧವಿತ್ತೋಽರ್ಚನ್ ವಿಪ್ರಾನ್ ಲಕ್ಷ್ಮೀಪ್ರಿಯಂಕರಃ ॥**

### ವಚನ.

ಸಿರಿಸಹಿತನಾಗಿರುವ ಹರಿಯು ಆಜ್ಞೆಯ ಕೊಂಡು ಪರಮೇಷ್ಠಿ ಮಾಡಿದನು ಪರಮಾಷ್ಟವರ್ಗಕ್ಕೆ ತ್ವರದಿ ಮುಂದುದ್ಯೋಗ ಸರಸ್ವತಿಯು ಮೊದಲಾದ ಸರಸಿಜಾಕ್ಷಿಯರೆಲ್ಲ ಸರಸಾಗಿ ಬೇಗ ಶೃಂಗರಿಸಿಕೊಂಡರು ತಾವು ಗಿರಿಜೆಯಾದಳು ಆಗ ವರಕಳಸಗಿತ್ತಿ ತಾ ವರನಾಗಿ ಶೋಭಿಸಿದ ವರವೆಂಕಟೇಶಾ ॥ ಹರದಿಯರು ಮುಂದಾಗ ಹರುಷದಲಿ ನಾಲ್ಕುಕಡೆ ವರಸುವರ್ಣದ ಪೂರ್ಣ ವರಕಲಶಗಳನಿಟ್ಟು ವರರತ್ನಪೀಠವನು ತರಿಸಿ ಮಧ್ಯದಲಿಟ್ಟು ಸುರಗಿಯನು ಸುತ್ತಿ ಶ್ರೀಹರಿಗೆ ಮಾತಾಡಿದರು ಸುರಗಿಯಲಿ ಕೂಡೇಳೊ ಸುರರೊಡೆಯ ಬೇಗಿನ್ನು ತ್ವರದಿ ಮಜ್ಜನ ಮಾಡು ಹರಿಯೆ ನೀನೂ ॥ ೧ ॥

### ರಾಗ ನೀಲಾಂಬರಿ, ಆದಿತಾಳ.

ಇಂದುಮುಖಿಯರ ಮಾತು । ಇಂದಿರೇಶನು ಕೇಳಿ ॥ ಕಂದಗಂದನು ಶೋಕದಲೀ । ನೊಂದು ಮನದಲೀ ॥ ೧ ॥ ಸರಸ ಸಂಪಿಗೆ ಯೆಣ್ಣೆ । ಎರದು ಪೂಸುವದಕ್ಕೆ ॥ ಹಿರಿಯರೆಂಬುವರಾರೆನಗೆ । ಹರಸುವರಾರೀಗಾ ॥ ೨ ॥ ಅಕ್ಕರದಿಂದ ಪೂಸಿ । ಹಿಕ್ಕಿ ಎರೆಯುವದಕ್ಕೆ ॥ ಅಕ್ಕತಂಗಿಯರಾರಿಲ್ಲಾ । ಅಕ್ಕರವಿಲ್ಲಾ ॥ ೩ ॥ ಪಡದ ತಾಯಿಯು ಇಲ್ಲ । ವಡಹುಟ್ಟಿದವರಿಲ್ಲ ॥ ಬಿಡದ ಕರ್ಮಕ್ಕೆ ಮಾಡುವದು । ಬಿಡುವದೆ ಇದು ॥ ೪ ॥ ಚಂದದಾನಂತಾದ್ರಿಯೊಳು । ಚಂದಲ್ಲ ಈ ಉತ್ಸವ ॥ ತಂದೆತಾಯಿಗಳಿಲ್ಲದೆ । ನೊಂದು ಬಳಲಿದೆ ॥ ೫ ॥

## ವಚನ.

ಇಂದಿರೇಶನ ಮಾತಿಗಂದನೀಪರಿ ಬ್ರಹ್ಮಯೆಂದಿಗಾದರು ನಿನಗೆ ತಂದೆತಾಯಿಗಳಿಲ್ಲ ಮುಂದೆ ವಡಹುಟ್ಟಿದವರಿಂದೆಲ್ಲಿ ಬರುವರು ಮಂದಿಯರ ಮೋಹಿಸುತ ಸಂದೇಹ ಬಡಿಸುವದು ಚಂದೇನೊ ನಿನಗೆ ಇದು ಇಂದಿರಾದೇವಿ ಕೈಯಿಂದ ನೀ ಪೂಸಿಕೊ ಚಂದವಾಗೀ ॥ ಎಂದಿಗಗಲದೆ ನಿನ್ನ ಹೊಂದಿರುವಳೀಕೆ ಇವಳಿಂದಧಿಕ ಮತ್ತಿಲ್ಲ ಸಂದೇಹವ್ಯಾಕೆ ಎಂತೆಂದ ಮಾತಿಗೆ ಹರಿಯು ಮಂದಹಾಸದಿ ನಗುತ ಮುಂದಿರುವ ತನ್ನ ಆ ಸುಂದರಿಯ ಮುಖವನು ಚಂದಾಗಿ ಕಡೆನೋಟದಿಂದ ನೋಡಿದನೂ ॥ ೧ ॥ ಹರಿಯ ಮನಸಿನ ಭಾವ ಸಿರಿದೇವಿ ತಾ ತಿಳಿದು ತರಿಸಿದಳು ತೈಲವನು ವರ ರುಗ್ಮಪಾತ್ರದಲಿ ಹರಿಯು ಹರುಷದಲೆದ್ದು ತ್ವರದಿ ಋಷಿಗಳ ಪಾದಕೆರಗಿ ಆಜ್ಞೆಯ ಕೊಂಡು ವರ ರತ್ನಪೀಠದಲಿ ಸರಸಾಗಿ ಕುಳಿತಾ ॥ ಹರದೆಯರ ವಡಗೂಡಿ ಹರಿಣಾಕ್ಷಿ ತಾ ಬಂದು ಹರಿಯ ಕೇಶಗಳನ್ನು ಹರವಿ ಬಹು ಸ್ನೇಹದಲಿ ಸರಸಾದ ಸಂಪಿಗೆಯ ವರ ತೈಲ ಧಾರೆಯನು ಹರುಷದಿಂದಲಿ ಯೆರೆದು ಹರಸಿದಳು ಹೀಗೇ ॥ ೨ ॥ ಖಂಡ ವಿರಹಿತ ವರ ಅಖಂಡ ಮಹದೈಶ್ವರ್ಯಮಂಡಿತನೆ ಭಕ್ತರಿಗುದ್ದಂಡ ಆಯುಷ್ಯ ಕೊಡು ಪುಂಡರೀಕಾಕ್ಷನೆ ಅಖಂಡವರ ಸಂತತಿ ಉದ್ದಂಡ ಸಂಪತ್ತು ಮನಗಂಡು ನೀ ಕೊಟ್ಟು ಬ್ರಹ್ಮಾಂಡನಾಯಕನೆ ಭೂಮಂಡಲಾಧಿಪನಾಗಿ ತಂಡತಂಡದ ಜನರ ಕಂಡು ಪಾಲಿಸು ಕೂಡಿಕೊಂಡು ಯೆನ್ನಾ ॥ ಈ ಪರಿಯು ಹರಸುತಲೆ ತಾ ಪೂಸಿ ಅರಸಿನದಿ ಲೇಪಿಸಿದಳಾ ಜಗದ್ವ್ಯಾಪಕನ ಮೈಯಲ್ಲಿ ರೂಪವತಿಯರ ಕೂಡಿ ಶ್ರೀಪತಿಗೆ ಯೆರೆವವಳು ತಾ ಪೀತೋದಕದಿ ಸಂತಾಪಹಾರಕಳೂ ॥ ೩ ॥ ಮಂದಗಮನೆಯರಿಂದ ತಂದಿತ್ತ ಕಸ್ತೂರಿಗಂಧಪರಿಮಳದಿಂದ ಚಂದಾಗಿ ಮೈಗೊರಸಿ ಮುಂದಕ್ಕೆ ಎರೆವುತಿರೆ ತಂದಳಾ ರತಿದೇವಿ ಚಂದದಾರತಿ ಆಗ ಇಂದಿರಾದೇವಿ ಅವಳಿಂದ ಒಡಗೂಡಿ ಮುಕುಂದನ ಫಣೆಗೆ ಮುದದಿಂದ ಕುಂಕುಮವಿಟ್ಟು ಮುಂದೆ ಆರತಿ ಬೆಳಗಿ ॥ ಮುಂದೆ ಮತ್ತೆರದು ತ್ವರದಿಂದ ಹರಸಿದಳಾಗ ಹಿಂದಿನ್ಹಾಗೆ ಸುಂದರಾಂಗಿಯು ತನ್ನ ಚಂದಾದ



ಮೂಗುತಿಯ ಮುಂದುಚ್ಚಿ ಹರಿವಾಣದ್ಹಿಂದಿಟ್ಟು ಎತ್ತಿ ಗೋವಿಂದನ ಮೇಲ್ಪಿಡಿದು ಚಂದಚಂದದ ಕಲಶವೃಂದದಿಂದೋಕುಳಿಯ ಚಂದಾಗಿ ಎರದಳಾನಂದದಲಿ ಸುಂದರಿಯರಿಂದ ಕೂಡೀ ॥ ೪ ॥ ಚಿತ್ತ ಸಂಭ್ರಮದಿ ಸಾವಿತ್ರಿ ತಂದಿತ್ತ ವರ ವಸ್ತ್ರದಲಿ ಮೈವರಸಿ ಸುತ್ತ ಜರತಾರಿಯಿಂದತ್ಯಂತ ಶೋಭಿಸುವ ವಸ್ತ್ರಪೀತಾಂಬರವ ಮತ್ತೆ ಉಪವಸ್ತ್ರವನು ಹಸ್ತದಲಿ ಕೊಟ್ಟು ಬಹುಭಕ್ತಿಯಲಿ ಗಿರಿಜೆ ತಂದಿತ್ತ ಧೂಪದ ಹೊಗೆಯು ಯುಕ್ತಿಯಿಂದ್ಹಾಕಿದಳು ಸುತ್ತಕೇಶಗಳಲ್ಲಿ ಮತ್ತೆ ಅವುಗಳನೆಲ್ಲ ಸುತ್ತಿ ಕಟ್ಟಿದಳೂ ॥ ಭಕ್ತವತ್ಸಲ ತನ್ನ ಪುತ್ರಿ ಭಾಗೀರಥಿಯು ಭಕ್ತಿಂದ ತಂದಿತ್ತ ರತ್ನದ್ಹಾವಿಗೆ ಮೆಟ್ಟಿ ಪತ್ನಿಯಳ ಕೈಪಿಡಿದು ಹಸ್ತಲಾಘವದಿಂದ ಹತ್ತು ಹೆಜ್ಜೆಯ ನಡೆದು ಉತ್ತುಮಾಸನದಲ್ಲಿ ಹತ್ತಿ ಕುಳಿತಾ ॥ ೫ ॥

## ರಾಗ ಶಂಕರಾಭರಣ, ಆದಿತಾಳ.

ಎಲ್ಲರು ಬಂದರು ಬಹು ಉಲ್ಲಾಸದಿಂದಲ್ಲೆ ಅವನ ॥ ಚಲ್ವಿಕೆಯ ನೋಡುತಲೆ ಅಲ್ಲೆ ಕುಳಿತರೂ ॥ ೧ ॥ ಕಂದರ್ಪನ ರಾಣಿ ಮತ್ತೆ ಇಂದ್ರನ ರಾಣಿ ಇಬ್ಬರು ॥ ಚಂದದ ಚಾಮರಗಳ ಬಂದು ಪಿಡಿದರು ॥ ೨ ॥ ಭಕ್ತಿಂದ ಭಾರತಿದೇವಿ ಛತ್ರವ ಪಿಡಿದಳು ॥ ಸಾವಿತ್ರಿ ತಂದು ಕೊಟ್ಟಳು ವಿಚಿತ್ರದ ಕನಡೀ ॥ ೩ ॥ ಕನ್ನಡಿಯ ನೋಡಿಕೊಂಡು ಸಣ್ಣನಾಮವನ್ನು ಹಣೆಗೆ ॥ ಚನ್ನಾಗಿ ಹಚ್ಚಿಕೊಂಡ ಚನ್ನಿಗ ತಾನು ॥ ೪ ॥ ಬದಿಯಲಿದ್ದ ಬಕುಲಾವತಿಯು ಮುದದಿಂದ್ಹೀಗೆಂದಳು ಸೊಸೆಗೆ ॥ ಮದುಮಗನಿಗೆ ಕುಂಕುಮ ಹಚ್ಚು ಮದಗಜಗಮನೆ ॥ ೫ ॥ ಸಿದ್ಧಾಗಿ ಲಕುಮಿ ತಾನು ಎದ್ದು ಪ್ರಾಣಪತಿಯ ಫಣೆಗೆ ॥ ತಿದ್ದಿ ಕುಂಕುಮನಿಟ್ಟಳು ಮುದ್ದು ಸುರಿವುತಾ ॥ ೬ ॥ ಮುಂದಲ್ಲೆ ಕುಬೇರ ಕೊಟ್ಟ ಚಂದದಾಭರಣಗಳಿಟ್ಟು ॥ ಸಂಧ್ಯಾನುಷ್ಠಾನವು ವಿಧಿಯಿಂದ ಮಾಡಿದಾ ॥ ೭ ॥ ಮನ್ನಿಸಿ ಮುನಿಗಳಿಗೆ ನತಿಸಿ ಪುಣ್ಯದಾ ತಾಯಿಗೆ ನತಿಸಿ ॥ ಪುಣ್ಯಾಹವಾಚನಕೆ ಕುಳಿತಾ ಪುಣ್ಯಾತ್ಮ ತಾನು ॥ ೮ ॥ ತಡಮಾಡದೆ ಬಂದು ಅವನ ಮಡದಿ ಮಹಾಲಕುಮಿಯು ॥ ಒಡಗೂಡಿ ಕುಳಿತಲ್ಲೆ ಸಡಗರದಿಂದಾ ॥ ೯ ॥ ಮತ್ತಲ್ಲಿ


Rarest Archiver

ವಸಿಷ್ಠಮುನಿಯು ಮುತ್ತಿನರಾಶಿಗಳಿಂದ ॥ ಉತ್ತುಮ ಗದ್ದಿಗೆಯು ಬರದ ಕ್ಲೃಪ್ತದಿಂದಲ್ಲೇ ॥ ೧೦ ॥ ಮಧುಸೂದನನ ಕೈಯಿಂದಲ್ಲೆ ಮುದದಿ ಪುಣ್ಯಾಹವಾಚನ ॥ ವಿಧಿಯಿಂದ ಮಾಡಿಸಿದನು ವಿಧಿಸುತ ತಾನು ॥ ॥ ೧೧ ॥ ಆ ಬ್ರಹ್ಮಸಮುದಾಯಕ್ಕೆಲ್ಲ ತಾಂಬೂಲ ದಕ್ಷಿಣೆಗಳು ॥ ಸಂಭ್ರಮದಿಂದಲ್ಲೆ ಕೊಟ್ಟ ತಾ ಬ್ರಹ್ಮದೇವಾ ॥ ೧೨ ॥ ದೇವತೆಗಳಿಗೆಲ್ಲ ಸ್ನೇಹಭಾವದಿಂದ ವಸ್ತ್ರಗಳನು ದೇವಾಧಿದೇವಗೆ ಕೊಟ್ಟರಾವೇಳೆಯಲ್ಲೀ ॥ ೧೩ ॥ ಮುತ್ತಿನ ಆರತಿ ತಂದು ಅರ್ತಿಯಿಂದ ಬೆಳಗಿದರು ॥ ಮುತ್ತಿನ ಅಕ್ಷತೆ ನಿಟ್ಟ ಮುತ್ತೈದೆರಲ್ಲೆ ॥ ೧೪ ॥ ಕಲಭಾಷಣದಿಂದಲ್ಲೆ ಹರಿಗೆ ಕುಲಪುರೋಹಿತ ನುಡಿದ ॥ ಕುಲದೇವಿ ಯಾವಾಕೆ ನಿನಗೆ ಶ್ರೀನಾಥ ಪೇಳೋ ॥ ೧೫ ॥ ಹಲವು ಕಾಲದಲ್ಲಿ ಎನ್ನ ಕುಲಪುರೋಹಿತನಾದ ಮೇಲೆ ॥ ಕುಲದೇವಿ ಯಾವಾಕೆ ಅರಿಯೆ ಮುನಿನಾಥ ನೀನೂ ॥ ೧೬ ॥ ಚೆಲುವ ಚೆನ್ನಿಗನೆ ನಿನಗೆ ಕುಲಗೋತ್ರಗಳಿದ್ದರೆ ನಾನು ಕುಲಪುರೋಹಿತೆನಿಸುವೆನೊ ಶ್ರೀನಾಥ ನಿನಗೆ ॥ ೧೭ ॥ ಫಲಕಾಲದಲ್ಲೀಗ ನೀನು ಕುಲಗೋತ್ರ ತೆಗಿಯಲು ಬೇಡ ॥ ಕುಲದೇವಿ ಎನಗೆ ಉಂಟು ಮುನಿನಾಥ ಕೇಳೋ ॥ ೧೮ ॥ ಯಾವಾಕೆ ನಿನಗೆ ಕುಲದೇವಿ ಯೆನಿಸುವಳು ಮುಖ್ಯ ॥ ಯಾವ ರೂಪದಿಂದೆಸೆವಳು ಶ್ರೀನಾಥ ಪೇಳೋ ॥ ೧೯ ॥ ಶಮಿಯೆಂದು ಕರಿಸುವಳಾಕೆ ಪ್ರಮಿತವೃಕ್ಷರೂಪದಿಂದ ॥ ಅಮಿತಾದ ಫಲ ಕೊಡುವಳಯ್ಯ ಮುನಿನಾಥ ಕೇಳೂ ॥ ೨೦ ॥ ಎಲ್ಲರಿಗೆ ಬೇಕಾದಂಥ ಬಲ್ಲಿದ ಶಮಿಯೆಂಬೋ ವೃಕ್ಷ ॥ ಎಲ್ಲಿ ಇರುತಿಹುದು ಪೇಳೊ ಶ್ರೀನಾಥ ನೀನೂ ॥ ೨೧ ॥ ಇಲ್ಲೆ ಈ ಉತ್ತರ ದಿಕ್ಕಿನಲ್ಲಿ ಕೌಮಾರೆಂಬೊ ತೀರ್ಥ ॥ ದಲ್ಲೆ ಇರುತಿಹುದು ವೃಕ್ಷ ಮುನಿನಾಥ ಕೇಳೋ ॥ ೨೨ ॥ ವರದಾನಂತಾದ್ರೀಶ ತಾ ಈ ಪರಿಯೆಂದು ॥ ಪರಿವಾರ ಸಹಿತ ತ್ವರದಿ ನಡದ ಕುಲದೇವಿಯ ಕರೆವುದಕೆ ॥ ೨೩ ॥

### ವಚನ.

ಕಮಲನಾಭನು ಬಂದ ಶಮಿಯ ಸನ್ನಿಧಿಯಲ್ಲಿ ಕ್ರಮದಿಂದ ಪೂಜಿಸುತ ನಮಿಸಿ ವರ ಬೇಡಿದನು ಶಮಿಯೆ ನೀ ದಯಮಾಡು



ನಮಗೆ ಕುಲದೇವತೆಯೆ ಅಮಿತ ವಿಘ್ನವ ಹರಿಸಿ ಪ್ರಮಿತ ಕಾರ್ಯವ ಮಾಡು ಕ್ರಮದಿಂದ ನಿನ್ನ ಪರಾಕ್ರಮವ ಬಲ್ಲೆನು ಶಮಿ ಶಮಯ ಮೇ ಎಂತೆಂಬ ವಿಮಲೋಕ್ತಿಯಿಂದಾ ॥ ಬೇಡುತೀಪರಿ ಸ್ತುತಿಮಾಡಿ ಕುಲದೇವತೆಯ ಕೂಡಿ ನಡೆದನು ತಿರಿಗಿ ಪ್ರೌಢ ವಾದ್ಯಗಳೆಲ್ಲ ಕೂಡಿ ನುಡಿದವು ಆಗ ಮಾಡಿ ಬಹು ಶಬ್ದವನು ನೋಡುವಗ್ಗರುಷ ಸೂರಾಡುತಲೆ ಬಂದ ಹರಿ ಕ್ರೋಡರೂಪಿಯು ಬದಿಲೆ ಗಾಢನೆ ಸ್ನೇಹಸಂರೂಢನಾಗೀ ॥ ॥ ೧ ॥ ವರಹಮೂರುತಿಗಂದ ವರನಾದ ವೆಂಕಟನು ವರಹದೇವನೆ ಎನ್ನ ವರವಿವಾಹೋತ್ಸವಕೆ ತ್ವರಮಾಡಿ ಬರಬೇಕು ಧರಣಿದೇವಿಯು ಕೂಡಿ ಸರಸಾಗಿ ಎಲ್ಲರಿಗೆ ಹರಿಯೆ ನೀನೂ ॥ ಹರಿಯಂದ ಮಾತಿಗಾ ವರಹದೇವನು ನುಡಿದ ಹರಿ ಎನ್ನ ಸ್ಥಳದಲ್ಲಿ ಹಿರಿಯಳೆಂತೆಂದು ತಿಳಿ ಪರಮ ಬಕುಲಾವತಿಯು ಹರುಷದಲೆ ಬಿಡು ಎನ್ನ ಇರುವೆ ಕೃಷಿ ಕಾರ್ಯದಲಿ ನಿರತನಾಗೀ ॥ ೨ ॥ ಎಲ್ಲ ಈ ಪರಿ ಕೇಳಿ ಫುಲ್ಲನಾಭನು ಅವನ ಬಲ್ಲಿದಾಜ್ಞೆಯ ಕೊಂಡು ಉಲ್ಲಾಸಬಟ್ಟು ಮನದಲ್ಲಿ ಕುಲದೇವತೆಯ ಅಲ್ಲೆ ಸ್ಥಾಪನಮಾಡಿ ನಿಲ್ಲದಲೆ ಸ್ವಸ್ಥಾನದಲಿ ಬರುತ ರಮಾವಲ್ಲಭನು ನುಡಿದನಾಗಲ್ಲೆ ಈ ಪರಿಯು ॥ ಎಲ್ಲ ಹೊರಡಿರಿ ಇನ್ನು ಸುಳ್ಯಾಕೆ ತಡ ದೂರದಲ್ಲೆ ಇರುತಿಹುದು ಆ ಬಲ್ಲಿದಾಕಾಶಪುರ ಇಲ್ಲಿದ್ದ ಬಾಲಕರು ಎಲ್ಲ ವೃದ್ಧರು ಮತ್ತೆ ಮೆಲ್ಲಗ್ಹೋಗಲಿ ಮುಂದೆ ನಿಲ್ಲದಲೆ ಸಾಗೀ ॥ ೩ ॥ ತನ್ನ ತಂದೆಯ ವಚನವನ್ನು ಕೇಳೀಪರಿ ಮುನ್ನ ನುಡಿದನು ಬ್ರಹ್ಮ ಪುಣ್ಯಪುರುಷನೆ ಕೇಳು ಪುಣ್ಯಾಹವಾಚನವು ಚನ್ನಾಗಿ ನೀ ಮಾಡಿ ಮುನ್ನ ಆ ಕುಲದೇವಿಯನ್ನು ಸ್ಥಾಪನಮಾಡಿ ಉಣ್ಣದಲೆ ಪೋಗುವದು ಉಚಿತವಲ್ಲಾ ॥ ಸಣ್ಣ ಬಾಲರು ಮತ್ತೆ ಹೆಣ್ಣುಮಕ್ಕಳು ದೇಹ ಹಣ್ಣಾಗಿ ಇರುವ ಬಹುಪುಣ್ಯಶೀಲರು ಮತ್ತೆ ನಿನ್ನ ಕುಲಬಾಂಧವರು ಮಾನ್ಯ ಮುನಿಗಳು ಎಲ್ಲ ಉಣ್ಣದಲೆ ಹಸಿವೆಯಲ್ಲಿ ಬಣ್ಣಗೆಟ್ಟ ಹರೂ ॥ ೪ ॥ ತನ್ನ ತನಯನ ವಚನವನ್ನು ಕೇಳೀಪರಿಯು ಮುನ್ನ ಶ್ರೀಹರಿ ನುಡಿದ ಎನ್ನ ಪುತ್ರನೆ ಕೇಳು ಎನ್ನ ಕಾರ್ಯಕೆ ಸುಲಭವನ್ನು ಪೇಳುವರಿಲ್ಲ ನನ್ನ ಅನುಸಂಕಟ ನಾನು ಬಲ್ಲೆನೆ ಹೊರತು ನಿನ್ನ

ಮುಂದಾಡಿದರೆ ಇನ್ನು ಖರೆ ಕಾಂಬುವದೆ ಚನ್ನವಾಗೀ ॥ ಮುನ್ನ ಈ ಜನಕೆಲ್ಲ ಅನ್ನಖರ್ಚಿಗೆ ಎನಗೆ ಹೊನ್ನು ಎಲ್ಲಿಹುದ್ಹೇಳು ಘನ್ನದ ಬಡತನವನ್ನು ಭೋಗಿಸಿ ಬಿಡದೆ ಚೆನ್ನಾಗಿ ಬಹುಕಾಲವನು ಕಳೆದೆನು ಇಲ್ಲಿ ಮುನ್ನ ನಾ ಸ್ವಲ್ಪ ಈಗಿನ್ನ ಉಭ್ರಯದಿ ಸಂಪನ್ನನಾಗಿರುವೆನು ಎನ್ನ ನೋಡುವಿ ಹ್ಯಾಗೆ ಕಣ್ಣಿನಿಂದಾ ॥ ೫ ॥

## ರಾಗ ಶಂಕರಾಭರಣ, ಆದಿತಾಳ.

ಬ್ರಹ್ಮದೇವನು ಪರಬ್ರಹ್ಮನ ಮಾತಿಗೆ ॥ ಸುಮ್ಮನಾದನು ತಾ ಮಾತಾಡದಲೇ ॥ ೧ ॥ ಪಂಕಜಸಂಭವ ಶಂಕೆಯಿಂದಿರುತಿರೆ ॥ ಶಂಕರ ನುಡಿದ ನಿಶ್ಯಂಕದಲೇ ॥ ೨ ॥ ಪೇಳುವೆ ನಾ ಒಂದು ಕೇಳಯ್ಯ ಕೇಶವ ॥ ಬಾಲನ ಮೇಲೆ ಸಿಟ್ಟು ಮಾಡದಲೇ ॥ ೩ ॥ ಮಂದಿಯೊಳಗೆ ಇದು ಚಂದಲ್ಲ ನಿನ್ನ ಮಾತು ॥ ಸಂದೇಹವ್ಯಾಕೆ ಸಾಲ ತೆಗೆ ನೀನೂ ॥ ೪ ॥ ಮದುವೆಯ ಕೆಲಸಕ್ಕೆ ಮನೆಯ ಕಟ್ಟುವುದಕ್ಕೆ ॥ ಎದೆಗೊಟ್ಟು ಸಾಲವ ತೆಗೆಯುವದು ॥ ೫ ॥ ಮೊಮ್ಮಗನ ಮಾತಿಗೆ ಸಂಭ್ರಮಬಡುತಲೆ ॥ ಬ್ರಹ್ಮನಯ್ಯನು ಏಕಾಂತಕೆ ನಡದಾ ॥ ೬ ॥ ಮಗನಿಂದ ಕೂಡಿ ಆ ಮಗನ ಮಗನಿಂದ ಕೂಡಿ ॥ ಲಗಬಗಿ ಕುಬೇರನ ಕರಸಿದನೂ ॥ ೭ ॥ ಬಂದ ಕುಬೇರಗೆ ಅಂದನು ಈ ಪರಿ ॥ ಇಂದೆನಗೆ ಕೊಡು ಸಾಲ ಧನಪತಿಯೇ ॥ ೮ ॥ ಸಾಲವೆಂಬುವದೆಷ್ಟು ಮೇಲ್ಬಡ್ಡಿಯು ಎಷ್ಟು ॥ ಪೇಳು ಯೆನಗೆ ನೀನು ಶ್ರೀಪತಿಯೇ ॥ ೯ ॥ ದೊಡ್ಡ ಸಾಲವು ನಿಧಿ ಬಡ್ಡಿ ಏಕೋತ್ತರ ॥ ದುಡ್ಡಿಡದೆ ಮುಟ್ಟಿಸುವೆ ಧನಪತಿಯೇ ॥ ೧೦ ॥ ಕೊಟ್ಟ ಸಾಲವು ಮುಂದೆ ಮುಟ್ಟುವ ಬಗೆ ಹ್ಯಾಗೆ ॥ ಬೆಟ್ಟ ಸೇರಿದಿ ನೀನು ಶ್ರೀಪತಿಯೇ ॥ ೧೧ ॥ ಕಡು ಭಕ್ತಿಯಿಂದಲ್ಲೆ ನಡೆವ ಭಕ್ತರು ಯೆನಗೆ ॥ ಮುಡಿಪ ಕೊಟ್ಟದ್ದು ಕೊಡುವೆ ಧನಪತಿಯೇ ॥ ೧೨ ॥ ಬದಲಿ ಬರದು ಕೊಡು ಇದರಂತೆ ಪತ್ರವ ॥ ಚದುರ ಅನಂತಾದ್ರಿರಮಣನೇ ॥ ೧೩ ॥

## ವಚನ.

ಧನಪತಿಯು ನುಡಿ ಕೇಳಿ ವನಜನಾಭನು ಪತ್ರವನು ಬರೆದ ಹೀಗೆಂದು ಎಣಿಸಿ ಇಪ್ಪತ್ತೆಂಟುಗಣಿತ ಕಲಿಯುಗದಲ್ಲಿ ಋಣವಂತ



ವೆಂಕಟನು ಧನವಂತ ವೈಶ್ರವಣ ದಿನದಿನಕೆ ಅಧಿಕಾ ॥ ಅಬ್ದದೊಳಗೆ ವಿಳಂಬಾಬ್ದದಲಿ ವೈಶಾಖ ಶುದ್ಧ ಸಪ್ತಮಿಯಲ್ಲಿ ಶುದ್ಧ ಶುಭಕಾರ್ಯದಲ್ಲಿದ್ದ ವೆಂಕಟಪತಿಗೆ ವೃದ್ಧ ವೈಶ್ರವಣ ಕೊಟ್ಟದ್ದು ಖರೆ ನಿಧಿ ದ್ರವ್ಯ ವೃದ್ಧಿ ಸಹಿತಾಗಿ ಕೊಟ್ಟದ್ದು ಕೊಡುವದು ಇದಕೆ ಪದ್ಮಜಾಸನ ಸಾಕ್ಷಿ ರುದ್ರದೇವನ ಸಾಕ್ಷಿ ಸಿದ್ಧಾಗಿ ನಮ್ಮಿದುರಿಗಿದ್ದಂಥ ಅಶ್ವತ್ಥ ವೃದ್ಧವೃಕ್ಷವು ಸಾಕ್ಷಿ ಸಿದ್ಧ ನಿಶ್ಚಯವೂ ॥ ೧ ॥ ಪಂಡಿತನು ಹೀಗೆ ಧನಮಂಡಿತಗೆ ಬರಕೊಟ್ಟು ಖಂಡಮಾಡಿದ್ದು ಇಸಕೊಂಡು ಪ್ರಸ್ಥಕೆ ಮೂಲ ತಂಡುಲವು ಮೊದಲಾಗಿ ತಂಡತಂಡವು ಎಲ್ಲ ಕೊಂಡು ತರಿಸಿದ ತಾ ಉದ್ದಂಡವಾಗೀ ॥ ಕರಿಸಿ ಬೇಗಗ್ನಿಯನು ಸುರಿಸಿ ಅವನಲಿ ಸ್ನೇಹ ಸುರಸಾದ ಪಾಕವನು ಸರಸಾಗಿ ಮಾಡೆಂದ ಸರಸಿಜೋದ್ಭವಪಿತನ ಸರಸಾದ ಮಾತಿಗನುಕರಿಸಿ ನುಡಿದನು ಅಗ್ನಿ ಸುರಸಾದ ಪಾಕಕ್ಕೆ ಸರಸಾದ ಭಾಂಡಗಳು ಸರಸರನೆ ನೀ ತರಿಸು ಸರಸಿಜಾಕ್ಷಾ ॥ ೨ ॥ ಅನ್ನಕ್ಕೆ ಒಂದು ಪರಮಾನ್ನಕ್ಕೆ ಮತ್ತೊಂದು ಇನ್ನೊಂದು ಸೂಪಕ್ಕೆ ಮುನ್ನ ಮತ್ತೆಲ್ಲಕ್ಕು ಇನ್ನು ಬೇಕಾಗಿಹವು ನಿನ್ನಲ್ಲಿ ಒಂದಿಲ್ಲ ಇನ್ಹ್ಯಾಗೆ ನಾ ಪಾಕವನು ಮಾಡಲಿ ಪೇಳು ಚನ್ನವಾಗೀ ॥ ವಹ್ನಿ ವಚನವು ಕೇಳಿ ಮುನ್ನ ಶ್ರೀಹರಿ ನುಡಿದ ಚನ್ನಿಗನೆ ನಿಮ್ಮಲ್ಲೆ ಘನ್ನಕಾರ್ಯವು ಬರಲು ಅನ್ನಾದಿ ಭಾಂಡಗಳು ಚೆನ್ನಾಗಿ ಬಹಳುಂಟು ಎನ್ನ ಕಾರ್ಯಕ್ಕೆ ನಿಮಗಿನ್ನು ಭಾಂಡಗಳಿಲ್ಲ ಅನ್ಯರಾದವರು ನೀವಿನ್ನೇನು ಮಾಡೀರಿ ಎನ್ನ ದೈವಾ ॥ ೩ ॥ ಇಲ್ಲದ ಭಾಂಡ ಇನ್ನೆಲ್ಲಿ ಬರುವದು ಕಂಠ ಬಿಗಿದು ಪರರಿಗೆ ಬಾಯ ತೆಗೆದು ಬೇಡುವದೇಕೆ ಸ್ವಾಮಿಪುಷ್ಕರಣಿಯಲಿ ನೀ ಮಾಡು ಅನ್ನವನು ಪಾಪನಾಶಿನಿಯಲ್ಲಿ ॥ ಆಕಾಶಗಂಗೆಯಲಿ ಪಾಕಪರಮಾನ್ನ ತಿಳಿ ತುಂಬುರೆಂಬುವ ತೀರ್ಥ ತುಂಬಿರಲಿ ತುಪ್ಪ ತಿಳಿ ಪಂಡಿತನೆ ಸಾರರಸ ಪಾಂಡುತೀರ್ಥದಲಿರಲಿ ಪೂರ ಭಕ್ಷಗಳೆಲ್ಲ ಪೂರೈಸು ಸುಕುಮಾರಧಾರಿಕಾತೀರ್ಥದಲಿ ಉಳದ ತೀರ್ಥಗಳಲ್ಲಿ ಉಳದದ್ದು ಮಾಡೂ ॥ ॥ ೪ ॥ ಬುದ್ಧಿವಂತನು ಅಗ್ನಿ ಬುದ್ಧಿಪೂರ್ವಕದಿ ಹೇಳಿದ್ದ ರೀತಿಯು ಸಿದ್ಧಮಾಡ್ಯಡಿಗೆಯನು ಸಿದ್ಧಾಗಿ ತಾ ನುಡಿದ ಪದ್ಮನಾಭನೆ ಪಾಕ ಸಿದ್ಧ

ವಾಯಿತು ಮುಂದೆ ಉದ್ಯೋಗ ಮಾಡೇಳೊ ಉದ್ಧವನ ಸಖನೇ ॥ ಶ್ರೀಲಲಾಮನು ತಾನು ಕೇಳಿ ಈ ಪರಿಯು ಆ ಕಾಲದಲಿ ಷಣ್ಮುಖಗೆ ಹೇಳಿ ಕರೆಕಳಿಸಿದ ಸುಶೀಲ ಬ್ರಾಹ್ಮಣರನೆಲ್ಲ ಆಲಸ್ಯ ಬಿಟ್ಟು ತತ್ಕಾಲದಲೆ ಭೋಜನದ ಶಾಲೆಯಲಿ ಬಂದವರು ಸಾಲ್ಹಿಡಿದು ಕುಳಿತರು ವಿಶಾಲಾದ ಪಾಂಡುಸರ ಮೂಲ್ಹಿಡಿದು ಮುಂದೆ ಶ್ರೀಶೈಲಪರ್ಯಂತಾ ॥ ೫ ॥

### ರಾಗ ದೇಶಿ, ಅಟತಾಳ.

ತಪ್ಪದೆ ತಾ ಶಿವನಪ್ಪಗೆ ನುಡಿದವನಪ್ಪ ವೆಂಕಟರಾಯನೂ ॥ ತಪ್ಪದೆ ದೇವರಿಗರ್ಪಣ ಮಾಡು ನೀ ಒಪ್ಪಾಗಿ ನೈವೇದ್ಯವೂ ॥ ೧ ॥ ದೇವನ ಮಾತಿಗೆ ಆ ವೇಳೆಯಲಿ ಬ್ರಹ್ಮದೇವ ಹೀಗೆಂದ ತಾನು ॥ ಕೇವಲ ನಿನ್ಹೊರತು ದೇವರೆಂಬುವರಾರು ದೇವರ ದೇವ ನೀನೂ ॥ ೨ ॥ ಕಂಡನ ಮಾತಿಗೆ ಅಂದನು ಶ್ರೀಹರಿ ಮಂದಹಾಸದಿ ನಗುತ ॥ ಚಂದಾಗಿ ಅರ್ಪಿಸು ಇಂದು ಅಹೋಬಲನೆಂದೆನಿಸುವ ದೇವಗೆ ॥ ೩ ॥ ಹರಿಯು ಹೇಳಿದ ರೀತಿ ಮರಿಯದೆ ಮಾಡಿ ಭೂಸುರರಿಗರ್ಚಿಸಿದ ಬ್ರಹ್ಮ ॥ ತರಿಸಿದ ಬೇಗನೆ ವರ ಪತ್ರಾವಳಿಗಳ ಕರಸಿ ಆ ಗ್ರಹಗಳನಾ ॥ ೪ ॥ ಥಟ್ಟನೆ ಬಂದವರಷ್ಟು ಪಾತ್ರಗಳನ್ನು ದಿಟ್ಟಾಗಿ ಹಾಕಿದರು ॥ ಥಟ್ಟನೆ ಬಡಿಸಿದರಷ್ಟು ದಿಕ್ಪಾಲಕರಷ್ಟೂರು ಮೊದಲು ಮಾಡೀ ॥ ೫ ॥ ಉಪ್ಪು ಮೊದಲು ಮಾಡಿ ತುಪ್ಪವು ಕಡೆಯಾಗಿ ಒಪ್ಪಾಗಿ ಬಡಿಸಿದರೂ ॥ ಅಪ್ಪ ವೆಂಕಟರಾಯ ತಪ್ಪದೆ ಬಂದು ಕೃಷ್ಣಾರ್ಪಣ ಅಂದ ತಾನೂ ॥ ೬ ॥ ಮೇಲ್ಮತ್ತೆ ಭೋಜನಕಾಲಕ್ಕೆ ತಾ ಬಂದು ಹೇಳಿಕೊಂಡನು ಈ ಪರೀ ॥ ಬಹಳ್ಹೊತ್ತು ಆಯಿತು ಬಳಲಿದಿರೆಲ್ಲರು ಹುಳಿಯನ್ನ ಬಡವನಲ್ಲೇ ॥ ೭ ॥ ಹರಿಯಂದ ಮಾತಿಗೆ ಹರುಷಬಟ್ಟು ಅಲ್ಲಿರುವಂಥ ಭೂಸುರರೂ ॥ ವರ ಮುನಿಗಳು ಮತ್ತು ಪರಮಹಂಸರು ಎಲ್ಲ ತಿರುಗಿ ಮಾತಾಡಿದರೂ ॥ ೮ ॥ ಘನ್ನಮಹಿಮ ನಿನ್ನ ಅನ್ನ ಭೋಜನದಿಂದ ಧನ್ಯರಾದೆವು ನಾವೆಲ್ಲ ॥ ಚೆನ್ನಾಗಿ ವರ ಮುಕ್ತಿಯನ್ನೆ ತೋರಿಸುವದು ಅನ್ನಲ್ಲ ಅಮೃತವಿದು ॥ ॥ ೯ ॥ ಹೀಗೆಂದು ನುಡಿದು ಚಂದಾಗಿ ಭೋಜನಮಾಡಿ ತೇಗಿ ಕೈ



ತೊಳದರೆಲ್ಲಾ ॥ ಆಗಲ್ಲೆ ತಾಂಬೂಲ ಬೇಗನೆ ಕೊಟ್ಟನು ಭಾಗೀರಥಿಯ ಪಿತನು ॥ ೧೦ ॥ ಚೆನ್ನಾಗಿ ತಾರತಮ್ಯವನ್ನು ಬಿಡದೆ ಬಹು ಘನ್ನ ದಕ್ಷಿಣೆಗಳನು ॥ ಮುನ್ನ ಎಲ್ಲರಿಗೆ ಮನ್ನಿಸಿಕೊಟ್ಟ ಸುವರ್ಣಮುದ್ರಿಕೆಗಳನೂ ॥ ॥ ೧೧ ॥ ಕೊಂಡು ಆಶೀರ್ವಾದ ಪುಂಡರೀಕಾಕ್ಷ ಉದ್ದಂಡ ಸಂತೋಷದಿಂದಾ ॥ ಹೆಂಡತಿ ಸಹ ತನ್ನ ಹಿಂಡುಬಳಗ ಕೂಡಿಕೊಂಡು ಭೋಜನ ಮಾಡಿದಾ ॥ ೧೨ ॥ ಅಲ್ಲಿಂದ ಆ ರಾತ್ರಿಯಲ್ಲೆ ತಾ ಮಲಗಿದ ವಲ್ಲಭೆಯಿಂದ ಕೂಡೀ ॥ ಬಲ್ಲಿದಾನಂತಾದ್ರಿಯಲ್ಲೆ ಸೌಖ್ಯದಿಂದ ಎಲ್ಲರು ಮಲಗಿದರೂ ॥ ೧೩ ॥

### ವಚನ.

ಭಕ್ತವತ್ಸಲನಲ್ಲಿ ಭಕ್ತಿಪರವಶದಿಂದ ಉಕ್ತವಾದೀ ಕಥೆಯ ಚಿತ್ತಿಟ್ಟು ಕೇಳುವರಿಗತ್ಯಂತವಾಗಿ ಪುರುಷೋತ್ತಮನ ದಯ ಉಂಟು ಮತ್ತವರ ಕಾರ್ಯಕ್ಕೆ ಸತ್ಯ ಸಹಕಾರಿಗಳು ಸುತ್ತೆಲ್ಲ ಜನರೂ । ಪೃಥ್ವಿಯಲ್ಲಿರುವ ಬಹು ಭಕ್ತರನ ಪಾಲಿಸುತ ಉತ್ತುಮಾನಂತಾದ್ರಿಸಕ್ತನಾಗಿರುವ ಸರ್ವೋತ್ತಮನ ದಯವಿರಲು ಮತ್ತಿರುವ ವಿಘ್ನಗಳು ಹತ್ತದಲೆ ಮುಗಿಯಿತೊಂಭತ್ತು ಅಧ್ಯಾಯಾ ॥ ೧ ॥

### ಒಂಭತ್ತನೆಯ ಅಧ್ಯಾಯವು ಸಂಪೂರ್ಣವು.



॥ ರಮೇಶಾಯ ನಮಃ ॥

# ಹತ್ತನೆಯ ಅಧ್ಯಾಯವು.

ತಾರ್ಕ್ಷ್ಯಸ್ಕಂಧಸಮಾರೂಢಃ ಶ್ರೀಬ್ರಹ್ಮಾದಿಭಿರಾವೃತಃ ।
ಶುಕದತ್ತಫಲಾಹಾರಃ ಪಾಯಾತ್ ಪದ್ಮಾವತೀಪ್ರಿಯಃ ॥

## ರಾಗ ಶಂಕರಾಭರಣ, ಅಟತಾಳ.

ಹೊರಟಿತು ನಿಬ್ಬಣ ಈ ಪರಿ । ಶ್ರೀ । ಹರಿ ಕೂಡಿ ಮರುದಿನ ಪರಿ ॥ ಪಲ್ಲ ॥ ಗರುಡನೇರಿದ ಶ್ರೀನಿವಾಸನು । ರಾಜ । ವರ ಹಂಸ ನೇರಿದ ಬ್ರಹ್ಮನು ॥ ತ್ವರ ನಂದಿಯೇರಿದ ರುದ್ರನು । ಅ । ವರ ನಡು ಮಧ್ಯ ನಡದ ಶ್ರೀಹರಿ ತಾನೂ ॥ ೧ ॥ ದೇವಿ ಯೇರಿದಳಾಗ ರಥದಲಿ । ಬಕುಲಾ । ದೇವಿ ಯೇರಿದಳೊಂದು ರಥದಲೀ ॥ ಕೇವಲ ತಮ್ಮ ತಮ್ಮ ರಥದಲ್ಲಿ । ಉಳದ । ದೇವಿಯರೇರಿಕೊಂಡರು ಅಲ್ಲೀ ॥ ೨ ॥ ಉತ್ತುಮ ಮಂಗಳವಾದ್ಯವು । ನೌ । ಬತ್ತು ನಗಾರಿಗಳಾದವು ॥ ಮತ್ತೆ ಉಳದ ಎಲ್ಲ ವಾದ್ಯವು । ಬಹು । ಒತ್ತಿ ಶಬ್ದಮಾಡಿ ನುಡಿದವು ॥ ೩ ॥ ನಡದರು ಋಷಿ ಗಂಧರ್ವರು । ಬಹು । ಸಡಗರದಿಂದಲ್ಲೆ ಅಪ್ಸರರು ॥ ಬಡವ ಬಗ್ಗರು ಉಳಡ ಮನುಜರು । ಬಹು । ಗಡಿಬಿಡಿಯಿಂದಲ್ಲೆ ನಡದರೂ ॥ ॥ ೪ ॥ ಕುಂಟರು ಕುರುಡರು ಕಿವುಡರು । ಕಲ್ಲು । ಕಂಟಕ ಕಾಲಿಲೆ ತುಳಿವವರೂ ॥ ಗಂಟು ತಲೆಯಲಿಟ್ಟು ನಡಿಯುವರು । ತಪ್ಪ । ಗಂಟಾಗಿ ವದರುತಲಿಹೋರೂ ॥ ೫ ॥ ಕೆಲವರು ಗಂಡನ ವದರುವರು । ಮತ್ತು । ಕೆಲವರು ಹೆಂಡರನೊದರುವರೂ ॥ ಕೆಲವರು ತಂದೆಯನೊದರುವರು । ಮತ್ತು । ಕೆಲವರು ಮಕ್ಕಳನೊದರುವರೂ ॥ ೬ ॥ ಕೆಲವರು ಯೆಡವುತಲಿರುವರು । ಮತ್ತು । ಕೆಲವರು ಭರದಿಂದ ಬೀಳುವರೂ ॥ ಕೆಲವರೇಳೆಂದು ಯೆಬ್ಬಿಸುವರು । ಮತ್ತು । ಕೆಲವರು ನೋಡುತ ನಗುವರೂ ॥ ೭ ॥ ಬಾಲರಳುವ ಧ್ವನಿ ಆಯಿತು । ಜಗತ್ । ಪಾಲಕನ ಸೈನ್ಯ ನಡೆಯಿತೂ ॥



ಮೇಲಾದನಂತಾದ್ರಿ ಇಳಿಯಿತು । ಭೂ । ಪಾಲನ ಪುರದ್ವಾದಿ ಹಿಡಿಯಿತೂ ॥ ೮ ॥

## ವಚನ.

ಶೈಲವನು ಹಿಡಿದು ಭೂಪಾಲನ ಪುರತನಕ ಸಾಲ್ಹಿಡಿದು ನಡೆವಂಥ ಕಾಲದಲಿ ಮತ್ತಲ್ಲಿಡುವದಕೆ ಎಳ್ಳುಕಾಳಷ್ಟು ಸ್ಥಳವಿಲ್ಲ ಶ್ರೀಲಲಾಮನು ಮಧ್ಯಸಾಲಿನ ಮಧ್ಯಾಹ್ನಕಾಲದಲಿ ಶುಕಮುನಿಯ ಆಲಯಕೆ ಬಂದಾ ॥ ಕಾಲಿಗೆರಗಿದನು ಆ ಕಾಲಕ್ಕೆ ಮುನಿ ಬಂದು ಹೇಳಿಕೊಂಡೀ ಪರಿಯು ಶೈಲದೊಡೆಯನೆ ಎನ್ನ ಆಲಯಕೆ ನೀ ಬಂದ ಮೇಲೆ ಭೋಜನವು ಈ ಕಾಲದಲಿ ಮಾಡಿ ಆ ಮೇಲೆ ಪೋಗುವದು ಎನ್ನ ಮೇಲಿ ಕರುಣೆಯಿಂದಾ ॥ ೧ ॥ ಹೀಗೆಂದು ನುಡಿದ ಶುಕಯೋಗಿ ವಚನವು ಕೇಳಿ ಬಾಗಿ ತಾ ನಮಿಸುತಲೆ ಆಗ ಶ್ರೀಹರಿ ನುಡಿದಾ ಯೋಗಿಗಳು ನೀವು ಸುವಿರಾಗಿಗಳು ಸಂಸಾರ ನೀಗಿದಂಥವರು ಬೇಕಾಗಿ ನಾ ಸಂಸಾರಿ ಆಗಿ ಇರುವೆ ॥ ಇಲ್ಲೆ ಉಂಡರೆ ಮಿತಿಯು ಇಲ್ಲದಲೆ ಜನವು ನಮ್ಮಲ್ಲೆ ಇರುವದು ಬಹಳ ಅಲ್ಲೆ ನಿಲ್ಲದಲೆ ನಾವೆಲ್ಲರು ಭೋಜನಕೆ ಎಲ್ಲಿದ್ದರೀ ಹೊತ್ತು ಅಲ್ಲೆ ಆ ರಾಜಪುರದಲ್ಲೆ ಪೋಗುವದೂ ॥ ೨ ॥ ತಂಡತಂಡದ ಮಾತು ಪಂಡಿತಾಗಿರುವ ಮುನಿಮಂಡಲೇಶನು ಕೇಳಿಕೊಂಡು ಹೀಗೆಂದ ಬ್ರಹ್ಮಾಂಡಪತಿ ನೀ ಒಬ್ಬ ಉಂಡರೆ ಜಗವೆಲ್ಲ ಉಂಡಂತೆ ಆಗುವದು ಪುಂಡರೀಕಾಕ್ಷಾ ॥ ಬಹಳ ಪರಿಯಿಂದಲ್ಲೆ ಹೇಳಿಕೊಂಡಿಹ ಮಾತು ಕೇಳುತಲೆ ಮುಂದೆ ಆ ಕಾಲದಲಿ ತ್ವರ ಜಗತ್ಪಾಲ ಯೆನಿಸುವ ತನ್ನ ಬಾಲಕನ ಮುಖ ನೋಡಿ ಬಾಲೆ ನುಡಿದಳು ಬಕುಲಮಾಲಿಕೆಯು ತಾನೂ ॥ ೩ ॥

## ರಾಗ ವಸಂತಭೈರವಿ, ಆದಿತಾಳ.

ಇದು ಯೇನು ನಡತೆ ತರವೇ ॥ ತರವೆ ಹರಿಯೆ ಈ ಪರಿಯು ಮಾಡುವದು ॥ ಪಲ್ಲ ॥ ಸುಖಕರವಾಗಿಹ । ಶುಕಮುನಿ ವಚನವು ॥ ಲಕಿಸದೆ ಶುಭಕಾ । ರ್ಯಕೆ ಪೋಗುವದೂ ॥ ೧ ॥ ಬಲ್ಲಿದ ಶಕುನವು

ಇಲ್ಲೆ ನಿನಗೆ ತಿಳಿ ॥ ನಿಲ್ಲದೆ ಊಟಕೆ । ವಲ್ಲೆನೆಂಬುವದೂ ॥ ೨ ॥ ಶ್ರೀಶ ಅನಂತಾ । ದ್ರೀಶ ಮಹಾತ್ಮರ ॥ ಭಾಷೆಯು ಕೇವಲು । ದಾಸಿನ ಮಾಳ್ಪದು ॥ ೩ ॥

## ವಚನ.

ಹೆತ್ತ ತಾಯಿಾಪರಿಯಾಗಿ ಹೊತ್ತು ಹೊತ್ತಿಗೆ ತನಗೆ ಅತ್ಯಂತ ಹಿತ ಮಾಡುತಿರ್ದ ಬಕುಲಾವತಿಯ ಸತ್ಯವಚನವ ಹರಿಯು ಚಿತ್ತಿಟ್ಟು ಕೇಳುತಲೆ ಉತ್ತಮಾಯಿತು ಅಂದ ಮತ್ತೆ ಶುಕಮುನಿಗೇ ॥ ಉತ್ತರವ ಕೇಳಿ ಮುನಿ ಉತ್ತರಣೆಯ ಬೀಜ ವತ್ತಿ ಕೈಯಲಿ ವರಿಸಿ ಮತ್ತದರ ತಂಡುಲದಿ ಉತ್ತಮಾನ್ನವ ಮಾಡಿ ವೃತ್ತಾದ ಗುಳ್ಳಫಲದುತ್ತಮೋತ್ತಮ ಶಾಕ ತಿಂತ್ರಿಣಿಯ ರಸಸಹಿತ ಪಾತ್ರದಲಿ ಬಡಿಸಿ ಸತ್ಪಾತ್ರನಾಗಿರುವ ಸರ್ವೋತ್ತಮಗೆ ಅರ್ಪಿಸಿದ ಭಕ್ತಿಯಿಂದಾ ॥ ೧ ॥ ತೃಪ್ತನಾದನು ನಿತ್ಯತೃಪ್ತ ಹರಿ ತಾ ಉಂಡು ಮತ್ತೆ ಮುನಿಗಳು ಎದ್ದರತ್ಯಂತ ಕೋಪದಲಿ ಚಿತ್ತಜನ ಪಿತ ಅವರ ಚಿತ್ತವೃತ್ತಿಯು ತಿಳಿದು ಸತ್ಯದಲಿ ಎಲ್ಲರಿಗೆ ತೃಪ್ತಿ ಆಗಲಿ ಯೆಂದು ಫೂತ್ಕಾರ ಮಾಡಿದನು ತತ್ಕಾಲದಲ್ಲೀ ॥ ಉತ್ತಮಳು ಶ್ರೀರಮಾ ಮತ್ತೆ ಬ್ರಹ್ಮಾದಿಗಳು ಸುತ್ತ ಸನಕಾದಿಗಳು ಮತ್ತೆ ಶುಕ ಮೊದಲಾದ ಸತ್ವಶೀಲರು ಉಳಿದ ಸುತ್ತೆಲ್ಲ ಜನರು ಸಂತೃಪ್ತರಾದರು ಹರಿಯ ಫೂತ್ಕಾರದಿಂದಾ ॥ ೨ ॥ ನಿದ್ರೆಯನು ಮಾಡಿ ಅಲ್ಲಿದ್ದು ಆ ರಾತ್ರೆಯಲಿ ಎದ್ದು ಮರುದಿನಕೆ ಸನ್ನದ್ಧರಾದರು ಎಲ್ಲ ಪದ್ಮನಾಭನ ಕೂಡಿ ವಾದ್ಯ ವೈಭವದಿಂದ ಸಿದ್ಧಾಗಿ ಬಂದರು ವಿಯದ್ರಾಜನ ಪುರಕೆ ಶುದ್ಧಸಂಜೆಯಲೀ ॥ ಮುದ್ದು ವೆಂಕಟ ಬಂದ ಸುದ್ದಿಯನು ಕೇಳುತ ವಿಯದ್ರಾಜ ತಾ ಬಹಳ ಉದ್ರೇಕದಿಂದಲ್ಲೆ ಇದ್ದ ಜನರನ ಕೂಡಿ ಯೆದ್ದು ಯೆದುರಿಗೆ ಬಂದ ವಾದ್ಯವೈಭವದಿಂದ ಸಿದ್ಧನಾಗೀ ॥ ೩ ॥

## ರಾಗ ಕಾಂಬೋಧಿ, ಆದಿತಾಳ.

ಆ ಕಾಲದಲಿ ಕಂಡನು । ಹರಿಯ ಮುಖ । ಆ ಕಾಲದಲಿ ಕಂಡನು ॥ ಎಲ್ಲರ ಕೂಡ ಆಕಾಶರಾಜ ತಾನು ॥ ೧ ॥ ಹರುಷದಿಂದಲಿ



ಉಬ್ಬಿದ । ಹರಿಯ ಕಂಡು । ಹರುಷದಿಂದಲಿ ಉಬ್ಬಿದ ॥ ಎದುರುಗೊಂಡು ವರಪೂಜೆಯನು ಮಾಡಿದ ॥ ೨ ॥ ಅಳಿಯಗಾಭರಣವನು । ವಸ್ತ್ರವ ಕೊಟ್ಟು । ಅಳಿಯಗಾಭರಣವನು ॥ ಉತ್ಸವದಿಂದ ಕಳಿಸಿ ಮನೆಗೆ ಪೋದನು ॥ ೩ ॥ ಶ್ರೀನಾಥದೇವ ತಾನು । ಆ ಕಾಲಕ್ಕೆ । ಶ್ರೀನಾಥದೇವ ತಾನು ॥ ಕರೆದು ತೊಂಡಮಾನರಾಜಗೆ ನುಡಿದನು ॥ ೪ ॥ ಹಸಿದು ಬಂದೆವು ನಾವೆಲ್ಲ । ಉಣ್ಣದೆ ಬಹಳ । ಹಸಿದು ಬಂದೆವು ನಾವೆಲ್ಲ ॥ ಬೇಗನೆ ಪಾಕ ಹಸನಾಗಿ ಮಾಡಿಸೆಲ್ಲ ॥ ೫ ॥ ಅಕ್ಕರದಲಿ ರಾಜನು । ಆ ನುಡಿ ಕೇಳಿ । ಅಕ್ಕರದಲಿ ರಾಜನು ॥ ಮಾಡಿಸಿದನು ರುಕ್ಮೋತಪಡಿಗೆಯನು ॥ ೬ ॥ ಮಂಡಿಗೆ ಗುಳ್ಳೋರಿಗೆ । ಶಾವಿಗೆ ಮೊದಲು । ಮಂಡಿಗೆ ಗುಳ್ಳೋರಿಗೆ ॥ ಮಾಡಿಸಿ ಎಲ್ಲ ತೊಂಡಮಾನನು ಚಂದಾಗಿ ॥ ೭ ॥ ಹರಿಗೆ ಅರ್ಪಣೆಮಾಡಿದ । ದಿವ್ಯಾನ್ನವನು । ಹರಿಗೆ ಅರ್ಪಣೆಮಾಡಿದ ॥ ಎಲ್ಲರ ಕೂಡಿ ಹರಿಯು ಭೋಜನಮಾಡಿದ ॥ ೮ ॥ ಆನಂದದಿಂದಿದ್ದನು । ಆ ರಾತ್ರಿಯೊಳ್ । ಆನಂದದಿಂದಿದ್ದಾನು ॥ ಮಾಡಿದ ನಿದ್ರೆ ಅನಂತಾದ್ರೀಶ ತಾನು ॥ ೯ ॥

## ವಚನೆ.

ಶ್ರೀನಿವಾಸನು ಯೆದ್ದು ತಾನು ಮರುದಿನದಲ್ಲಿ ಮಾನಿತ ವಸಿಷ್ಠ ಮುನಿ ನೀನು ಕೇಳೆಂದ ಬಹುಮಾನದಲಿ ಈ ಹೊತ್ತು ನಾನು ಲಕ್ಷ್ಮಿಯು ಸಹಿತ ನೀನು ಬ್ರಹ್ಮನು ಮತ್ತೆ ಮಾನಿತಳು ಎನ ತಾಯಿ ತಾನು ಐವರು ಅನ್ನಹೀನರಾಗಿರುವುದು ಖೂನದಳಿ ಕನ್ನಿಕೆಯ ದಾನಪರ್ಯಂತಾ ॥ ಮಾನಿತನು ಆ ರಾಜಮಾನಿನಿಯು ಮತ್ತವನ ಮೀನಾಕ್ಷಿ ಕನ್ನಿಕೆಯು ಜ್ಞಾನಿ ಗುರು ಮತ್ತೆ ವಸುದಾನರಾಜನು ಅನ್ನಹೀನರೈವರು ಅವರು ಖೂನದಲಿ ಕನ್ನಿಕೆಯ ದಾನ ಪರ್ಯಂತಾ ॥ ೧ ॥ ಮೇಲೆ ಉಳದವರೆಲ್ಲ ವೇಳೆಗುಂಬುವರೆಂದು ಪೇಳು ಅರಸಗೆ ಯೆಂದು ಹೇಳಿ ಕಳಿಸಿದನಾಗ ಹೇಳಿದನು ಮುನಿ ಹರಿಯು ಹೇಳಿದಂತಾ ಭೂಮಿಪಾಲ ಮಾಡಿದನು ಮುನಿ ಹೇಳಿದಂತೆ ॥ ಮೇಲೆ ಮುನ್ನ ಸಾಯಾಹ್ನಕಾಲದಲಿ ಚತುರಂಗ ಪಾಲಸೈನ್ಯವ ನಡಿಸಿ ಕಾಳಿಕರ್ಣಿಯು ತೂರ್ಯ ತಾಳಮದ್ದಳೆ ಮೊದಲು


Rarest Archiver

ಬಾಳವಾದ್ಯಗಳಿಂದ ಮೇಲಾದ ಗುರು ಮುಂದೆ ಮೇಲೆ ತನ್ನವರಿಂದ ಕಾಲನಡಿಗಿಲೆ ಹರಿಯು ಆಲಯಕೆ ಬಂದಾ ॥ ೨ ॥ ಆ ವೇಳ್ಯದಲಿ ಧರಣಿ ದೇವಿ ತಾ ಲಜ್ಜೆಯಲಿ ದೇವಗುರು ಬೃಹಸ್ಪತಿಯ ಕೇವಲಾಜ್ಞದಿ ದೇವ ದೇವ ಯೆನಿಸುವ ಅಳಿಯದೇವಗರ್ಚಿಸಿ ಶುದ್ಧಭಾವದಲಿ ಅರ್ಪಿಸುತ ಶೇವಿಗೆಯ ಪರಮಾನ್ನ ಕೇವಲಾನಂದ ಸದ್ಭಾವ ಬಡಿಸಿದಳೂ ॥ ಆ ವಿಯದ್ರಾಜ ಮುಂದಾ ವೇಳೆಯಲ್ಲಿ ಐರಾವತಾನೆಯ ಮೇಲೆ ದೇವನಾ ಕುಳ್ಳಿರಿಸಿ ದೇವಋಷಿ ಮೊದಲಾದ ಯಾವತ್ತುರಿಂದ ನರದೇವ ಬಂದನು ಮನೆಗೆ ತೀವ್ರದಿಂದಾ ॥ ೩ ॥ ಬಹಳ ಉತ್ಸವದಿಂದ ಬಾಗಲಿಗೆ ಬರಲು ಆ ಕಾಲದಲಿ ತೊಂಡಭೂಪಾಲನಾ ಸತಿ ಜಗತ್ಪಾಲಕನ ಮೇಲೆ ನಿವಾಳಿ ಸುತ ಚೆಲ್ಲಿದಳು ಶೈಲದೊಡೆಯನು ಗಜದ ಮೇಲಿಂದ ಇಳಿದು ಆ ಮೇಲೆ ತಾ ಬಂದ ಸುವಿಶಾಲ ಮಂಟಪಕೇ ॥ ಮೇಲಾದ ಗದ್ದಿಗೆಯ ಮೇಲೆ ವರ ವೆಂಕಟನು ಕಾಲಿಟ್ಟು ಕುಳಿತನಾ ಮೇಲೆ ಬ್ರಹ್ಮಾದಿಗಳು ಗಾಲವ ವಸಿಷ್ಠಮುನಿ ವಾಲ್ಮೀಕ ಭೃಗು ಜಟಾಜಾಲಸಂಪನ್ನ ಶುಕ ದಾಲ್ಭ್ಯ ಮೊದಲಾದವರು ಸಾಲ್ಹಿಡಿದು ಕುಳಿತರಾ ಕಾಲಕೆ ಯೆಲ್ಲಾ ॥ ೪ ॥ ವದಗಿ ಬೇಗನೆ ವಿಷ್ಣುಪದರಾಜ ಆ ವಿಷ್ಣುಪದಯುಗ್ಮ ಸಂಕಲ್ಪವಿಧಿಯಿಂದ ತೊಳೆದು ಆ ಉದಕ ಶಿರದಲಿ ವಹಿಸಿ ಮುದದಿಂದ ಮಾಡಿದನು ಮಧು ಸೂದನನ ಪೂಜೆ ಮಧುಪರ್ಕದಿಂದಾ ॥ ಬುಧಜನರು ಪೇಳಿದಾಜ್ಞೆಯಲಿ ಗೃಹದೇವತಾಸನದಲ್ಲಿ ಹರಿಯ ಧ್ಯಾನದಲಿ ಇರುತಿರುವ ಆ ವಧುವಿನ ಕರತಂದು ಮದನಮೋಹನನ ಸನ್ನಿಧಿಗೆ ಸಮ್ಮುಖವಾಗಿ ಮುದದಿ ಇರಿಸಿದನಾಗ ಬದಿಲಿದ್ದ ಬೃಹಸ್ಪತಿಯು ವದಗಿ ವಧುವರಗಳಿಗೆ ಮಹಿತಾ ದಂತಃಪಟವ ಮುದದಿ ಮಧ್ಯದಲ್ಹಿಡಿದು ವದರಿದನು ಈ ಪರಿಯು ಮದುವೆಯು ಕಾಲಕ್ಕೆ ಮಧುರೋಕ್ತಿಯಿಂದಾ ॥ ೪ ॥

### ರಾಗ ಸೌರಾಷ್ಟ್ರ, ಅಟತಾಳ.

ಸಾವಧಾನಾಗಿರಿರಿನ್ನು ಸುಮೂಹೂರ್ತಕಾಲಕ್ಕೆ ಸಾವಧಾನಾ ॥ ದೇವಾಧೀಶನ ಲಗ್ನ ದಿವ್ಯವೇಳೆಯಲ್ಲಿ ಸಾವಧಾನಾ ॥ ಪಲ್ಲ ॥ ಪದ್ಮನಾಭನೆ



ನೀನು ಸಿದ್ಧಾಗಿ ಇರು ಕಂಡ್ಯ ಸಾವಧಾನಾ ॥ ಪದ್ಮಾವತಿಯೆ ನೀನು ಪದ್ಮನಾಭನ ಸ್ಮರಿಸು ಸಾವಧಾನಾ ॥ ೧ ॥ ಫಲಕಾಲದಲಿ ಚಂಚಲರಾಗ ದಲೆ ನೀವು ಸಾವಧಾನಾ ॥ ಕುಲದೇವಿ ಸ್ಮರಣೆ ನಿರ್ಮಲವಾಗಿ ಮಾಡಿರಿ ಸಾವಧಾನಾ ॥ ೨ ॥ ಶ್ರೇಷ್ಠಾದ ಅತ್ರಿವಸಿಷ್ಠಮುನಿಗಳೆಲ್ಲ ಸಾವಧಾನಾ ॥ ಸ್ಪಷ್ಟಾಗಿ ಶ್ರೀಮಂಗಲಾಷ್ಟಕ ಪಠಿಸಿರಿ ಸಾವಧಾನಾ ॥ ೩ ॥ ಮಂಗಳ ಮೂರ್ತಿಯ ಮನದಲ್ಲಿ ಸ್ಮರಿಸಿರಿ ಸಾವಧಾನಾ ॥ ಗಂಗಾದಿ ಸಕಲ ತೀರ್ಥಂಗಳ ಸ್ಮರಿಸಿರಿ ಸಾವಧಾನಾ ॥ ೪ ॥ ತಕ್ಕಾನಂತಾದ್ರಿಯೊಳು ಮುಖ್ಯಾಗಿರುವನಿಗೆ ಸಾವಧಾನಾ ॥ ಅಕ್ಕರದಿಂದಲ್ಲೆ ಅಕ್ಕಿಕಾಳ್ಹಾಕಿರಿ ಸಾವಧಾನಾ ॥ ೫ ॥

### ವಚನ.

ನುಡಿ ಕೇಳಿ ಬೃಹಸ್ಪತಿಯು ನುಡಿದರಾ ದ್ವಿಜರೆಲ್ಲ ದೃಢ ಮಂಗಲಾಷ್ಟಕವ ನುಡಿನುಡಿಗೆ ಸುಮುಹೂರ್ತನುಡಿಗಳನು ನುಡಿವುತಲೆ ತಡವಿಲ್ಲದಲೆ ಪೂರ್ಣಘಳಿಗೆ ತುಂಬಲು ಆಗ ಹಿಡಿ ಮುತ್ತಿನಾಕ್ಷತೆಯ ಹಿಡಿದು ಕರಕಮಲದಲೆ ಬಿಡದೆ ವಧುವರರುಗಳಿಗೆ ಗಡಗಡನೆ ಹಾಕಿದರು ಗಡಿಬಿಡಿಯ ಮಾಡೀ ॥ ನುಡಿದವಾ ಕಾಲದಲಿ ಕಡು ಸುರರ ಭೇರಿಗಳು ಬಿಡದೆ ನುಡಿದವು ಮತ್ತೆ ಬಿಡಿವಾದ್ಯಗಳು ಎಲ್ಲ ತಡಮಾಡದಲೆ ಸುರರು ದೃಢವಾಗಿ ಸಂಭ್ರಮಬಡುತ ಜಯಜಯ ಶಬ್ದ ನುಡಿದು ಪುಷ್ಪದವೃಷ್ಟಿ ಬಿಡದೆ ಮಾಡಿದರೂ ॥ ೧ ॥ ಬಲ್ಲಿದಾ ಸುಮುಹೂರ್ತದಲ್ಲೆ ಪದ್ಮಾವತಿಯ ಚಲ್ವ ಹಸ್ತದಲ್ಲಿದ್ದ ಬೆಲ್ಲ ಜೀರಿಗೆ ಸಹಿತ ಬಲ್ಲಿದಾಕ್ಷತೆಯು ಶ್ರೀವಲ್ಲಭಗೆ ಮಧ್ಯಶಿರದಲ್ಲಿ ಹಾಕಿಸಿದ ತಡವಿಲ್ಲದಲೆ ರಾಜಾ ॥ ಸರಸರನೆ ಆ ಮೇಲೆ ಸರಸಿಜಾಕ್ಷಿಯ ಮಧ್ಯಶಿರದಲ್ಲಿ ಬೇಕಾದ ವರಗಳನು ಕೊಡುವಂಥ ಕರಗಳನು ಮೇಲೆತ್ತಿ ವರಜೀರ ಗುಡಯುಕ್ತ ಪರಮಾಕ್ಷತೆಗಳನು ಹರಿಯು ಹಾಕಿದ ತಾನು ಹರುಷದಿಂದಾ ॥ ೨ ॥ ಮತ್ತಾಗ ಗುರು ವಿಯತ್ಪುತ್ರಿಯಳ ಜಲಸಹಿತ ಹಸ್ತಯುಗ್ಮವು ಹರಿಯ ಹಸ್ತದಲ್ಲಿರಿಸಿ ತಾ ಒತ್ತಿ ನುಡಿದ್ಧೀಪರಿಯು ಅತ್ರಿಋಷಿಗೋತ್ರದಲಿ ಉತ್ಪನ್ನಳೆನಿಸುತ ಸುಗಾತ್ರಿಯು ಸುಶರ್ಮಗೆ ಪ್ರಪೌತ್ರಿ ಯೆಂದೆನಿಸುವಳು ಉತ್ತಮ ಸುಧರ್ಮ

ನೃಪಪೌತ್ರಿಯೆಂದೆನ್ನಿಸುವಳು ಮತ್ತೆ ಆಕಾಶನೃಪಪುತ್ರಿ ಪದ್ಮಾವತಿಯು
ಸತ್ಯನಾಮದಲಿ ಅತ್ಯುತ್ತಮಳು ಕನ್ಯಾಪಾತ್ರಭೂತನೆ ಧ್ರಯಾಮಾತ್ರ
ದಲೆ ಸ್ವೀಕರಿಸು ಸೂತ್ರವಿಧಿಯೆಂಬ ಉತ್ತರಕೆ ನುಡಿದ ಪ್ರತ್ಯುತ್ತರ
ವಸಿಷ್ಠಮುನಿ ಗೋತ್ರ ವರ ವಾಸಿಷ್ಠಗೋತ್ರದಲಿ ಉತ್ಪನ್ನ ಉತ್ತಮ
ಯಯಾತಿಯ ಪ್ರಪೌತ್ರಯೆನಿಸುವ ಶೂರಪೌತ್ರೆನಿಪ ವಸುದೇವಪುತ್ರ
ವೆಂಕಟಪತಿಯು ಸತ್ಯನಾಮದಲಿ ಸರ್ವೋತ್ತುಮನು ವರನೂ ॥ ೩ ॥
ನೀತಿಯಲಿ ಕನ್ನಿಕೆಯ ಈತಗಂಗೀಕರಿಸಿ ಪ್ರೀತರಾದೆವೆನಲು ಆತ ಆಕಾ
ಶನೃಪ ಪ್ರೀತನಾದನು ಕೊಟ್ಟ ಪ್ರೀತಿಯಿಂದಲೆ ರಮಾನಾಥಗಾ ಕಾಲ
ದಲಿ ನೀತ ಕೊಡತಕ್ಕದ್ದು ನಾಥ ಕೊಟ್ಟನು ಮತ್ತೆ ಪ್ರೀತನಾಗೆಂದೂ ॥
ನೀಟಾಗಿ ದಕ್ಷಿಣೆಯು ಕೋಟಿ ನಿಷ್ಕವು ಕಪಟನಾಟಕಗೆ ತಾ ಕೊಟ್ಟ
ನೀಟಶತಭಾರದ ಕಿರೀಟ ಕೊಟ್ಟನು ಸ್ನೇಹಕೂಟದಲಿ ಕೊಟ್ಟ ಬಹು
ಮಾಟಭುಜಭೂಷ ವೈಮಾಟ ಉಳ್ಳವಗೇ ॥ ೪ ॥ ವಂಟ್ಯೊಂಟ್ರ
ಮುತ್ತುಗಳು ಉಂಟು ನೈಂಬದಪರಿಯು ಉಂಟಾದ ಜೋಡೆರಡು ವಂಟಿ
ಮುತ್ತನು ಕೊಟ್ಟ ಕಂಠದಲಿ ಶೋಭಿಸುವ ಕಂಠಭೂಷಣ ಕೊಟ್ಟ ಕಂಠಿ
ಯನು ಕೊಟ್ಟ ವೈಕುಂಠಪತಿಗೆ ॥ ವೆಂಕಟೇಶಗೆ ಕೊಟ್ಟ ಟೊಂಕಕುಡು
ದಾರ ವಜ್ರಾಂಕಬೆಲೆಯಿಲ್ಲದಕೆ ಕಿಂಕರಾಭಯಹಸ್ತ ಪಂಕಜದ್ವಂದ್ವಕೆ
ಅಲಂಕಾರವಾಗಿರುವ ಕಂಕಣವ ಕೊಟ್ಟ ಅಕಳಂಕಮೂರುತಿಗೇ ॥ ೫ ॥
ಕಂತುಪಿತ ತಾನು ತನ ಕಾಂತೆಯೆನಿಸುವಳಿಗೆ ಅನಂತಸೌಭಾಗ್ಯ ಕೊಡು
ವಂಥ ಮಂಗಳಸೂತ್ರ ಕಾಂತ ಕಟ್ಟಿದ ಕೊರಳ ಪ್ರಾಂತದಲಿ ಮಾಂಗಲ್ಯ
ತಂತುನೇತ್ಯಾದಿ ಸನ್ಮಂತ್ರದಿಂದಾ ॥ ಶಿಷ್ಟರೆಂಬುವರಾಗ ಶ್ರೇಷ್ಠ ವಧು
ವರರ್ಗಳಿಗೆ ಕಟ್ಟಿದರು ಕಂಕಣವ ಬೆಟ್ಟದಾಧಿಪ ತಾ ವಸಿಷ್ಠನಾಜ್ಞೆಯ
ಕೊಂಡು ಪಟ್ಟದರಸಿಯು ಕೂಡಿ ಶ್ರೇಷ್ಠ ಲಾಜಹೋಮ ಥಟ್ಟನೆ ಮಾಡಿ
ಸಂತುಷ್ಟನಾದಾ ॥ ೬ ॥ ಆ ಮೇಲೆ ಭೋಜನಕೆ ತಾ ಮಹಾತ್ಮನು
ನಡೆದ ಪ್ರೇಮದಲಿ ವಧುಸಹಿತ ಶ್ರೀಮಹಾಲಕ್ಷ್ಮೀ ಆ ಭೂಮಕೊಪ್ಪು
ವರೆಲ್ಲ ನೇಮದಲಿ ಕುಳಿತರಾ ಭೂಮದಲಿ ಸಾಲ್ಹಿಡಿದು ಪ್ರೇಮದಿಂದಾ॥
ರೂಪವಂತೆಯರು ಅಪರೂಪ ಪಕ್ವಾನ್ನಗಳು ಆ ಪಕ್ವ ಬಹುವಿಧಾಪೂಪ



ಶಾಕಾದಿಗಳು ಸೂಪ ಬಡಿಸಿದರೆಲ್ಲ ಶ್ರೀಪತಿಯು ತಾ ತುಪ್ಪದಾಪೋಶನವ
ಕೊಂಡ ಆ ಪತ್ನಿಕರದಿಂದ ಆ ಪರಮಪುರುಷನಿಂದಾ ಪಂಕ್ತಿ ಸಾಗುತಿರೆ
ರೂಪವಂತೆಯರು ಸಲ್ಲಾಪನುಡಿ ನುಡಿದರಾಲಾಪದಿಂದಾ ॥ ೭ ॥

## ರಾಗ ಪೂರ್ವಿ, ಆದಿತಾಳ.

ಊಟಕೆ ಬಂದರು ನೋಡಿರಿ ಬೀಗರು । ಇವರೆಲ್ಲಾರು । ಊಟಕೆ
ಬಂದರು ನೋಡಿರಿ ಬೀಗರು ॥ ಪಲ್ಲ ॥ ಊಟಕೆ ಬಂದರು ಬೀಗರು
ಅರ್ಭಟದಿ ಒಡಲೊಳಗ್ಹಾಕುವರೂ । ನೀಟದಿ ಅರಸರು ಉಂಬುವ
ಅನ್ನದ ಊಟದ ರುಚಿಯನು ಅರಿಯಾರೂ ॥ ಅನುಪಲ್ಲ ॥ ಎಷ್ಟು
ಹಾಕಿದರುಂಬುವರು ಜಗ। ಜಟ್ಟಿ ಅಗ್ನಿ ಮೊದಲಾದವರು ॥ ಹೊಟ್ಟೆಯ
ಪರಿಮಿತಿ ಇಲ್ಲದೆ ಇರುವರು । ಹೊಟ್ಟೆಬಾಕರೆಂದೆನಿಸುವರೂ ॥ ೧ ॥
ಒಬ್ಬರು ನಾಲ್ಕುಮುಖದಿಂದುಂಬುವರು । ಒಬ್ಬರು ಐದುಮುಖದಿಂ
ದುಂಬುವರು ॥ ಒಬ್ಬರು ಆರುಮುಖದಿಂದುಂಬುವರು। ಅಬ್ಬರ ನೋಡಿರಿ
ಬೀಗರದೂ ॥ ೨ ॥ ಇಣಿಮೂಗಿನವನು ಒಬ್ಬ । ಇಳಿಮೂಗಿನವನು
ಒಬ್ಬ ॥ ಇಳೆಯೊಳಗಿಂಥವರಿಲ್ಲ ಎಲ್ಲಿಂ । ದಿಳಿದುಬಂದರು ಇಂದಿವರೂ ॥
॥ ೩ ॥ ಕೊಬ್ಬಿಲೆ ಬಂದವರೆಲ್ಲಾರು । ಹೆಬ್ಬುಲಿಯಂತಲೆ ಇರುತಿಹರು ॥
ಉಬ್ಬಿಲೆ ಊಟಾ ಉಂಬುವರಿಲ್ಲೆ । ಹಬ್ಬದ ಶೆಡ ತೆಗೆಯುವರೂ ॥ ೪ ॥
ಎಂಥಾ ಬೀಗರು ಬಂದವರು । ಹಂತಕತನದಲಿರುತಿಹರು ॥ ಅಂತಹತ್ತ
ಗುಡದಲೆ ಇರುತಿರುವಾ । ನಂತಾದ್ರೀಶನ ಬಾಂಧವರೂ ॥ ೫ ॥

## ರಾಗ ಪೂರ್ವಿ, ಆದಿತಾಳ.

ಊಟಕೆ ಬಂದವರಲ್ಲಾ ಬೀಗರು । ನಾವೆಲ್ಲರು । ಊಟಕೆ ಬಂದ
ವರಲ್ಲಾ ॥ ಪಲ್ಲ ॥ ಚಾಟಿಕತನದಿ ರಾಜಕುಮಾರಿಯ । ಬೇಟಿಗೆ ಮೆಚ್ಚಿ
ದಾತನ ಮದುವೆ । ನೋಟಕೆ ಬಂದೆವೆಲ್ಲಾ ಹೊರತೂ ॥ ಅನುಪಲ್ಲ ॥
ಸುರವರಲೋಕದಲಿ ಇರುವವರು । ಸರಸದಿ ಅಮೃತವ ಸುರಿವವರು ॥
ಹರಿಯಾಭಿಡೆಯಕೆ ನಿರುವಾಹ ಇಲ್ಲದೆ । ನರರಾ ಪಂಕ್ತಿಲೆ ಕುಳಿತವರೂ ॥
॥ ೧ ॥ ಉಬ್ಬಿಲೆ ನಿತ್ಯದಲಿರುತಿಹರು । ಒಬ್ಬರಲ್ಲ ಬಹಳಾದವರು ॥ ಹಬ್ಬ


Rarest Archiver

ನಿತ್ಯ ದಾವಾತಗೆ ಆತನ । ಗರ್ಭವಾಸದಲ್ಲಿರುತಿಹರೂ ॥ ೨ ॥ ಸಂತತ ನಿಸ್ಪೃಹರಾಗಿಹರು । ಹರಿಯಂತಲೆ ಅನುಸರಿಸಿರುವವರು ॥ ಹಂತಕ ರಲ್ಲಾನಂತಾದ್ರೀಶನ । ಚಿಂತಕರೇ ಸರಿ ಎಲ್ಲವರೂ ॥ ೩ ॥

### ವಚನ.

ನೀಟಾದ ಈ ವಿನೋದಾಟನುಡಿ ಕೇಳಿ ಕಡೆ ನೋಟ ನೋಡುತ ರತ್ನಪೀಠಸ್ಥ ಆ ಕಪಟನಾಟಕನು ತಾ ನಗುತ ನೀಟಾಗಿ ಭೂಮದಲಿ ಊಟಮಾಡಿದ ಮೇಲೆ ಉರುಟಣೆಗೆ ನಡೆದಾ ॥ ಬಂದು ಕುಳಿತನು ಬಹಳ ಚಂದದಾಸನದಲ್ಲಿ ಇಂದುಮುಖಿಯಳ ಕೂಡಿ ಬಂದರೆಲ್ಲರು ಗೋವಿಂದನುರುಟಣೆ ನೋಡೇವೆಂದು ಆಕಾಶದಲಿ ಮುಂದೆ ಪದ್ಮಾವತಿಯು ಇಂದಿರಾದೇವಿ ಕೈಯಿಂದ ಅರಸಿನ ಕೊಂಡು ಅಂದಳೀಪರಿ ಆಕೆ ಅಂದ್ಹಾಗೆ ತಾನೂ ॥ ೧ ॥

### ರಾಗ ಮೋಹನಕಲ್ಯಾಣಿ, ಆದಿತಾಳ.

ಜಯಜಯ ವೆಂಕಟರಾಯ । ಜಯಜಯ ಸುಂದರಕಾಯ ॥ ಜಯಜಯ ಲಕ್ಷ್ಮಿಪ್ರಿಯ। ಜಯ ಮಹಾರಾಯ ॥ ಪಲ್ಲ ॥ ಎನ್ನರಸಾ ಘನ್ನರಸಾ । ಎನ್ನ ಪ್ರಾಣದರಸಾ ॥ ನಿಮ್ಮ ಮುಖವ ತನ್ನೀ । ಅರಸಿನ ಹಚ್ಚುವೆನು ॥ ೧ ॥ ಉಣ್ಣದೆ ಮೆಲ್ಲನೆ ಪೋಗಿ। ಕಣ್ಣಿಗೆ ಬೀಳದೆ ಕದ್ದು । ಬೆಣ್ಣೆ ತಿನ್ನುವ ಮುಖಕೆ । ಅರಸಿನ ಹಚ್ಚುವೆನು ॥ ೨ ॥ ಅಂಜದೆ ಹೇಸಿಗೆಯಾದ । ಕಂಜನಾಭನೆ ಶಬರೀ ॥ ಎಂಜಲ ಕೊಳ್ಳುವ ಕೈಗೆ। ಅರಸಿನ ಹಚ್ಚುವೆನು ॥ ೩ ॥ ವಲ್ಲಭ ನೀ ಎನಕೈಲಿ । ಕಲ್ಲಿಲಿ ತಾಡಿತವಾದ ॥ ಬಲ್ಲಿದ ನಿಮ್ಮಯ ಹಣೆಗೆ । ಕುಂಕುಮ ಹಚ್ಚುವೆನು ॥ ೪ ॥ ಎದೆಮೇಲೊಬ್ಬಳು ಇರಲು । ಹದಿನಾರುಸಾವಿರ ॥ ಸುದತಿಯರಪ್ಪಿದ ಎದೆಗೆ । ಪರಿಮಳ ಹಾಕುವೆನು ॥ ೫ ॥ ಹಗಲೆಲ್ಲ ಗೋಪಿಯರ। ಹೆಗಲಮೇಲಿಟ್ಟಿರುವ ॥ ಸುಗುಣ ನಿಮ್ಮಯ ಕೈಗೆ । ಗಂಧ ಹಚ್ಚುವೆನೂ ॥ ೬ ॥ ಇಂಥಾ ಮಾತುಗಳೆಲ್ಲಾ । ಅಂತಃಕರಣದಿ ನುಡಿದೇ ॥ ಸ್ವಾಂತಕ್ಕೆ ತರ ಬೇಡ ಆ । ನಂತಾದ್ರೀಶಾನೇ ॥ ೭ ॥



### ವಚನ.

ಅಂದು ಈ ಪರಿಯು ಗೋವಿಂದಗರಸಿನ ಹಚ್ಚಿ ಮುಂದೆ ಕುಂಕುಮ ಫಣೆಗೆ ಚಂದಾಗಿ ಹಚ್ಚಿದಳು ಗಂಧ ಪರಿಮಳಮಾಲೆಯಿಂದಲಂಕರಿಸುತಲೆ ವಂದನೆಯ ಮಾಡಿದಳು ಒಂದೆ ಮನಸಿನಲೀ ॥ ಇಂದೀವರಾಕ್ಷಿ ಹೀಗೆಂದು ಆಡಿದ ಮಾತು ತಂದು ಮನಸಿಗೆ ಆಗ ಇಂದಿರಾರಮಣ ತಾ ಇಂದಿರಾದೇವಿ ಕೈಯಿಂದ ಅರಸಿನ ಕೊಂಡು ಮಂದಹಾಸದಿ ನಗುತ ಅಂದನೀ ಪರಿಯೂ ॥ ೧ ॥

### ರಾಗ ಮೋಹನಕಲ್ಯಾಣಿ, ಆದಿತಾಳ.

ಜಯಜಯ ಕಂಜೋದ್ಭೂತೇ । ಜಯಜಯ ಮಂಜುಳಗೀತೇ ॥ ಜಯಜಯ ಕಂಜಜಮಾತೇ। ಜಯ ಪ್ರಖ್ಯಾತೇ ॥ ಪಲ್ಲ ॥ ಎನ್ನರಸೀ ಘನ್ನರಸೀ । ಎನ್ನ ಪ್ರಾಣದ ಅರಸೀ ॥ ನಿನ್ನಯ ಮುಖವನು ತಾ । ಅರಸಿನ ಹಚ್ಚುವೆನೂ ॥ ೧ ॥ ಮಡದಿ ನೀ ವಂದಿಷ್ಟು । ಭಿಡಿಯ ಇಲ್ಲದೆ ಎನಗೇ ॥ ನುಡಿದಿರುವ ಮುಖವನು ತಾ । ಅರಸಿನ ಹಚ್ಚುವೆನೂ ॥ ೨ ॥ ಕೊರವಿ ಕೈಯಲಿ ಯೆನ್ನಾ । ಪರಮ ಪಾದದ ರೇಣೂ ॥ ಕೆರೆದು ಹಚ್ಚಿದ ಹಣೆಗೆ । ಕುಂಕುಮ ಹಚ್ಚುವೆನೂ ॥ ೩ ॥ ನಾರಿ ನಾಚಿಗೆ ಬಿಟ್ಟು । ನಾರದಮುನಿಗೆನ್ನ ॥ ಧಾರೆಯಾಗಿತ್ತ ಕೈಗೆ । ಗಂಧ ಹಚ್ಚುವೆನೂ ॥ ॥ ೪ ॥ ಕದನಮಾಡುತ ಯೆನ್ನ । ಕುದುರೆಯ ಕೊಂದಿರುವ ॥ ಎದೆಗಾರತಿ ನಿನ್ನೆದೆ ತಾ। ಪರಿಮಳ ಹಾಕುವೆನೂ ॥ ೫ ॥ ಚನ್ನಿಗ ರಾಜಕುಮಾರೀ । ನಿನ್ನ ಮಾತಿಗೆ ನಾನೂ ॥ ಮನ್ನಿಸಿ ಉತ್ತರಕೊಟ್ಟೆ । ಎನ್ನೊಳು ಕೋಪವಿಲ್ಲಾ ॥ ೬ ॥ ಕಾಂತೆ ನೀ ಭಕ್ತಿಯಲಿ । ಎಂಥಾ ಮಾತಾಡಿದರೂ ॥ ಸಂತೋಷವೆನಗೆ ಅ। ನಂತಾದ್ರೀಶನಿಗೇ ॥ ೭ ॥

### ವಚನ.

ಆಡಿ ಈ ಪರಿ ಮಾತು ಮಾಡಿದನು ಉರುಟಣೆಯ ನೋಡುವರಿಗ್ಗರುಷ ಸ್ಫೂರಾಡುತಲೆ ಕಡೆನೋಟ ನೋಡುತಲೆ ಸತಿಯಿಂದ ಕೂಡಿ

ಶೋಭಿಸಿದಾಗ ರೂಢಿಯಲಿ ದೃಷ್ಟಾಂತ ಕೂಡದ್ದಾಗೆ ॥ ಕ್ರೀಡಾದಿ ಗುಣ ಸಹಿತ ಪ್ರೌಢಹರಿ ಈ ರೀತಿ ಮಾಡಿ ಪದ್ಮಾವತಿಯ ಕೂಡಿ ಕುಳಿತಿರುವುದು ನೋಡಿ ನಾರಿಯರಾಗ ಕೂಡಿ ಲಕ್ಷ್ಮಿಯು ಮುಂದೆ ಮಾಡುತಲಿ ಆರತಿಯ ಮಾಡಿದರು ಹರಿಯ ಕೊಂಡಾಡಿ ಪಾಡುತಲೆ ॥ ೧ ॥

### ರಾಗ ಸಾವೇರಿ, ಆದಿತಾಳ.

ಮಂಗಳಂ ಜಯ ಮಂಗಳಂ ॥ ಪಲ್ಲ ॥ ವರವೈಕುಂಠದಿ ಬಂದವಗೆ । ವರಗಿರಿಯಲಿ ಸಂಚರಿಸುವಗೆ ॥ ವರಹದೇವನ ಅನುಸರಿಸಿ ಸ್ವಾಮಿಪು । ಷ್ಕರಣಿತೀರದಲ್ಲಿರುವವಗೆ ॥ ೧ ॥ ಸರಸದಿ ಬೇಟೆಯ ಹೊರಟವಗೆ । ಸರಸಿಜಾಕ್ಷಿಯಳ ಕಂಡವಗೆ ॥ ಮರುಳಾಟದಿ ತಾ ಪರವಶನಾಗುತ । ಕೊರವಿವೇಷ ಧರಿಸಿರುವವಗೆ ॥ ೨ ॥ ಗಗನರಾಜಪುರಕ್ಹೋದವಗೆ । ಬಗೆಬಗೆ ನುಡಿಗಳ ನುಡಿದವಗೆ ॥ ಅಗವಾಸಿಗೆ ನಿನ್ನ ಮಗಳನ ಕೊಡು ಯೆಂದು । ಗಗನರಾಜನ ಸತಿಗ್ಹೇಳಿದವಗೆ ॥ ೩ ॥ ತನ್ನ ಕಾರ್ಯ ತಾ ಮಾಡಿದವಗೆ । ಇನ್ನೊಬ್ಬರ ಹೆಸರ್ಹೇಳಿದವಗೆ ॥ ಮುನ್ನ ಮದುವೆ ನಿಶ್ಚಯವಾಗಿರಲು । ತನ್ನ ಬಳಗ ಕರಿಸಿರುವವಗೆ ॥ ೪ ॥ ಎತ್ತಿ ನಿಬ್ಬಣ ಹೊರಟವಗೆ । ನಿತ್ಯತೃಪ್ತನಾಗಿರುವವಗೆ ॥ ಉತ್ತರಣೆಯ ವಾಗರನುಂಡು । ತೃಪ್ತನಾಗಿ ತೇಗಿರುವವಗೆ ॥ ೫ ॥ ಒದಗಿ ಮುಹೂರ್ತಕೆ ಬಂದವಗೆ । ಸದಯಹೃದಯನಾಗಿರುವವಗೆ ॥ ಮುದದಿಂದಲಿ ಶ್ರೀಪದುಮಾವತಿಯಳ । ಮದುವೆ ಮಾಡಿಕೊಂಡ ಮದುಮಗಗೆ ॥ ೬ ॥ ಕಾಂತೆಯಿಂದ ಸಹಿತಾದವಗೆ । ಸಂತೋಷದಿ ಕುಳಿತಿರುವವಗೆ ॥ ಸಂತತ ಶ್ರೀಮದನಂತಾದ್ರೀಶಗೆ । ಶಾಂತಮೂರುತಿ ಸರ್ವೋತ್ತಮಗೆ ॥ ೭ ॥

### ವಚನ.

ಹೀಗೆಂದು ಆರತಿಯ ಬಾಗಿ ಬಳಕುತ ಮಾಡಿ ಸಾಗಿದರು ನಾರಿಯರು ಹೀಗೆ ಪರಮೋತ್ಸವದಿ ಹಿಂಗದಲೆ ನಾಲ್ಕುದಿನ ಸಾಂಗಮಾಡಿದ ರಾಜ ನಾಗವಲಿ ಮಾಡಿ ಮುಂದಾಗಮೋಕ್ತದಿ ಮಗಳನಾಗ ಒಪ್ಪಿಸಿದ



ಚಂದಾಗಿ ಶ್ರೀಹರಿಗೆ ॥ ಆಗ ತಾ ಕೃತಕೃತ್ಯನಾಗಿ ಆ ರಾಜ ಚತುರಂಗ ಸೈನ್ಯವ ಕೊಟ್ಟು ಪೋಗಿ ದೂರದಲೆ ತಾನಾಗಿ ಕಳಿಸಿದ ಮುಂದೆ ನಾಗವೇಣಿಯ ಕೂಡಿ ನಾಗಶಯನನು ನಡದ ನಾಗಗಿರಿಗೆ ॥ ೧ ॥ ಬೆಟ್ಟದೊಡೆಯನ ಈ ವಿಶಿಷ್ಟಕಥೆಯನು ಬಹಳ ನಿಷ್ಠೆಯಲಿ ಕೇಳಿದರೆ ಎಷ್ಟು ಪೇಳಲಿ ಫಲವ ಕಷ್ಟ ದೂರಾಗುವದು ಕಟ್ಟುವದು ಕಲ್ಯಾಣ ದುಷ್ಟಗ್ರಹಗಳ ಬಾಧೆ ಬಿಟ್ಟು ಓಡುವದೂ ॥ ಕಷ್ಟದಲಿ ಪುತ್ರಕಾಮೇಷ್ಟಿ ಮಾಡಿದ ಫಲವು ಇಷ್ಟರಿಂದಲೆ ಕೊಡುವ ಇಷ್ಟದಾಯಕ ಹರಿಯು ಕೊಟ್ಟು ಸಲಹುವ ಮತ್ತೆ ತುಷ್ಟನಾಗುತ ಕರೆದಭೀಷ್ಟಕೊಡುವನು ಎಲ್ಲ ಕೊಟ್ಟುಬಿಡುವನು ಮುಕ್ತಿ ಕಟ್ಟಕಡೆಗೆ ॥ ೨ ॥ ವಿಸ್ತರಿಸಿ ನಾ ಇನ್ನು ಎತ್ತ ವರ್ಣಿಸಲಿ ಪುರುಷೋತ್ತಮನ ಮಹಿಮೆ ತನ್ನ ಚಿತ್ತದೊಲ್ಲಭಗಂತ ಹಸ್ತಗೊಡದಲೆ ಇರುವ ಎತ್ತ ಬೇಕಾದತ್ತ ಮತ್ತನಂತಾದ್ರಿಯಲಿ ನಿತ್ಯದಲ್ಲಿರುವಾ ॥ ಮತ್ತೆ ಬಿಡದಲೆ ಎನ್ನ ಚಿತ್ತದಲಿ ನಿಂತು ಯಾವತ್ತು ಕಾರ್ಯಗಳನ್ನು ನಿತ್ಯ ಮಾಡಿಸುವ ಸರ್ವೋತ್ತಮನು ತಾ ಎನ್ನ ಭಕ್ತಿಯಲಿ ಮೆಚ್ಚಿ ಬೆನ್ಹತ್ತಿ ಮಾಡಿಸಿದ ಈ ಹತ್ತು ಅಧ್ಯಾಯಾ ॥ ೩ ॥

### ಹತ್ತನೆಯ ಅಧ್ಯಾಯವು ಸಂಪೂರ್ಣವು.

॥ ಶ್ರೀಕೃಷ್ಣಾರ್ಪಣಮಸ್ತು ॥

## ವೆಂಕಟೇಶಪಾರಿಜಾತವು

## ಸಂಪೂರ್ಣವು.

ಈ ಪುಸ್ತಕವು ಪಾನಂಜೆ ಗುರುರಾವ್—ಇವರ ಉಡುಪಿ ಶ್ರೀಕೃಷ್ಣಮುದ್ರಾಲಯದಲ್ಲಿ ಮುದ್ರಿಸಲ್ಪಟ್ಟು, ಸ್ವಕೀಯ ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯದಿಂದ ಪ್ರಕಟಿಸಲ್ಪಟ್ಟಿತು. ಗತ ಶಾ ಶಕ ೧೮೫೪. ಇಸವಿ 1932.


Rarest Archiver

# ಕನ್ನಡಲಿಪಿಯ ಪುಸ್ತಕಗಳು.

**ವೆಂಕಟೇಶಸಹಸ್ರನಾಮ (ಬ್ರಹ್ಮಾಂಡಪುರಾಣಾಂತರ್ಗತ)** 0—5—0

ವೆಂಕಟೇಶಸಹಸ್ರನಾಮಾವಳಿ, ವರಾಹಪುರಾಣಾಂತರ್ಗತ ವೆಂಕ
ಟೇಶಾಷ್ಟೋತ್ತರಶತನಾಮಸ್ತೋತ್ರ, ವೆಂಕಟೇಶಾಷ್ಟೋತ್ತರಶತ
ನಾಮಾವಳಿ ಸಹಿತ.

**ಶ್ರೀನಿವಾಸಕಲ್ಯಾಣವು** 0—8—0

ಏರಿ ಶೇಷಾಚಾರ್ಯರೆಂಬ ಶ್ರೀ ಶ್ರೀನಿವಾಸದೇವರ ಭಕ್ತವರ್ಯ
ರಿಂದ ತನಗೆ ದೇವರು ಸ್ವಪ್ನದಲ್ಲಿ ಅಪ್ಪಣೆಯಿತ್ತಂತೆ ಭಕ್ತಜನರು
ದ್ಧಾರಕ್ಕಾಗಿ ವಿವಾಹಾದಿ ಮಂಗಳೋತ್ಸವಗಳಲ್ಲಿ ಮುತ್ತೈದೆ
ಯರು ಹಾಡಿಹರಸಲಿಕ್ಕೆ ಅನುಕೂಲವಾಗುವಂತೆ ರಚಿತವಾದ
ಉತ್ತಮ ಕೀರ್ತನಗ್ರಂಥವು.

**ಯಕ್ಷಗಾನ ಪದ್ಮಾವತೀಕಲ್ಯಾಣವು** 0—6—0

ಈ ಪ್ರಸಂಗವು ತಾಳಮದ್ದಳೆ, ಅಭಿನಯಗಳಿಗೆ ಅತಿಸುರಸವಾ
ಗಿದ್ದು ನಿತ್ಯದಲ್ಲೂ ಓದುವವರಿಗೆ ಶ್ರೀನಿವಾಸನಡಿದಾವರೆಗಳಲ್ಲಿ
ಭಕ್ತಿಯನ್ನು ಬೇರೂರಿಸಲು ಕಾರಣವಾಗಿದೆ.

**ವೆಂಕಟೇಶಮಾಹಾತ್ಮ್ಯ (ಕನ್ನಡಲಿಪಿ)** 0—5—0

**" (ಬಾಲಬೋಧಲಿಪಿ)** 0—4—0

ಆದಿತ್ಯಪುರಾಣಾಂತರ್ಗತವಾದ ಈ ಗ್ರಂಥವು ನಿತ್ಯಪಾರಾಯಣ
ದಿಂದ ಐಹಿಕಾಮುಷ್ಮಿಕ ಫಲವನ್ನು ಸಂಪಾದಿಸಿಕೊಳ್ಳಲು ಅತ್ಯು
ಪಯುಕ್ತವಾಗಿದೆ ಕನ್ನಡಲಿಪಿಯಲ್ಲಿಯೂ ಬಾಲಬೋಧಲಿಪಿ
ಯಲ್ಲಿಯೂ ಮುದ್ರಿಸಲ್ಪಟ್ಟಿರುವುದು.

**ಶ್ರೀವೆಂಕಟೇಶಮಾಹಾತ್ಮ್ಯ (ಸಟೀಕ)** ಅಚ್ಚಿನಲ್ಲಿದೆ

ಭವಿಷ್ಯೋತ್ತರಪುರಾಣಾಂತರ್ಗತವಾದ ಈ ಗ್ರಂಥವು ನಿತ್ಯಪಾರಾ
ಯಣಕ್ಕನುಕೂಲವಾಗುವಂತೆಯೂ ತಿಳಿಗನ್ನಡದಿಂದ ವಾಚಕರಿಗೆ
ಮೂಲದ ಅಭಿಪ್ರಾಯವು ಮನಸ್ಸಿಗೆ ನಡುವಂತೆಯೂ ಭಾಷಾ
ತಾತ್ಪರ್ಯಸಹಿತವಾಗಿ ಅಂದವಾದ ಅಕ್ಷರಗಳಿಂದ ಸನಾಭಿಯಾಗಿ
ಮುದ್ರಿಸಲ್ಪಡುತ್ತಿದೆ. ಬೇಗನೇ ತಯಾರಾಗುವುದು.

**ವೆಂಕಟೇಶ ಉದಯರಾಗ** 0—1—0

**ಸ್ತೋತ್ರರತ್ನಮಾಲಾ ಭಾಗ ೪** 0—2—0

ಇದರಲ್ಲಿ ವಿಶಿಷ್ಟ ವೆಂಕಟೇಶಸ್ತೋತ್ರಗಳು ಅಡಗಿವೆ.

# ಕನ್ನಡಲಿಪಿಯ ಪುಸ್ತಕಗಳು.



॥ ಶ್ರೀಃ ॥

ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ,

ಉಡುಪಿ.

# ವೆಂಕಟೇಶಪಾರಿಜಾತ

ಚತುರ್ಥಮುದ್ರಣ ೧೫೦೦

ಶ್ರೀಕೃಷ್ಣಮುದ್ರಣಾಯ, ಉಡುಪಿ.

1932.

ಬೆಲೆ: 0—8—0.